॥ ಶ್ರೀ ಭಗವಾನ್ ಧನ್ವಂತರಿ ॥

ಆಯುರ್ವೇದೀಯ

# ಯಂತ್ರಶಸ್ತ್ರ ಪ್ರಣಿಧಾನ ಪರಿಚಯ





— ವೈದ್ಯಗುರು
ಡಾ. ಅ. ಪಲಸೀಕರ

# ಯಂತ್ರಶಸ್ತ್ರ ಪ್ರಣಿಧಾನ ಪರಿಚಯ




## ಉಪೋದ್ಘಾತ

ಭಾರತದಲ್ಲಿ ಆಯುರ್ವೈದಿಕರು ಆತ್ರೇಯ ಚಿಕಿತ್ಸಾ ಪದ್ಧತಿಗಳನ್ನೇ ಅಳವಡಿಸಿಕೊಂಡವರೇ ಹೆಚ್ಚು ಜನರು. ಮತ್ತು ಅದರಲ್ಲಿಯೇ ಸಾಕಷ್ಟು ಪ್ರಾವೀಣ್ಯತೆಯನ್ನು ಪಡೆದವರಾಗಿರುವರು. ವಯೋವೃದ್ಧರೂ ಜ್ಞಾನವೃದ್ಧರೂ ಆಡಂಬರವಿಲ್ಲದೆ ಶಾಂತ ರೀತಿಯಿಂದ ತಮ್ಮ ತಮ್ಮ ಭಾಗದಲ್ಲಿ ಲೋಕಪ್ರಿಯರಾಗುತ್ತ ಶಿಷ್ಯ ಪರಂಪರೆಯನ್ನು ಕಾಯ್ದುಕೊಂಡು ಬಂದರು. ಇವರೆಲ್ಲರೂ ಒಟ್ಟು ಗೂಡಿ ನಿಖಿಲ ಭಾರತೀಯ ಆಯುರ್ವೇದ ಮಹಾಮಂಡಲ ಮತ್ತು ವಿದ್ಯಾಪೀಠ ಎಂಬುದೊಂದು ಮಹಾ ಸಂಸ್ಥೆಯನ್ನು ಸ್ಥಾಪಿಸಿಕೊಂಡರು. ಮತ್ತು ಭಾರತದ ಎಲ್ಲ ಭಾಗಗಳಲ್ಲಿ ಆಸೇತು ಹಿಮಾಚಲ (ಕಾಶ್ಮೀರದಿಂದ ಕನ್ಯಾಕುಮಾರಿ ಮತ್ತು ಕರಾಚಿಯಿಂದ ಚಿತಗಾಂಗ, ಮಣಿಪುರ) ಪರ್ಯಂತರ ಮಹಾಸಮ್ಮೇಲನಗಳನ್ನು ಮಾಡಿಕೊಂಡರು. ಈ ಸಮ್ಮೇಲನಗಳಲ್ಲಿ ಅವರಿಗೆ ಕಂಡು ಬಂದದ್ದೇನಂದರೆ:— ಕೆಲವರು ಕಾಯಚಿಕಿತ್ಸಕರು, ಬಾಲ ಚಿಕಿತ್ಸಕರು, ಗ್ರಹ ಚಿಕಿತ್ಸಕರು, ಊರ್ಧ್ವಾಂಗ ಚಿಕಿತ್ಸಕರು, ದಂಷ್ಟ್ರಾಚಿಕಿತ್ಸಕರು; ವೃಷಚಿಕಿತ್ಸಕರೇ ಹೆಚ್ಚು ಜನರೆಂದೂ ಅದರಲ್ಲಿ ಅವರು ಹೆಚ್ಚಾಗಿ ಪ್ರಾವೀಣ್ಯತೆಯನ್ನು ಪಡೆದವರೆಂದೂ ಕಂಡು ಬಂದಿತು. ಆದರೆ ಆಯುರ್ವೇದದ ಅಷ್ಟಾಂಗ ಚಿಕಿತ್ಸೆಯಲ್ಲಿಯ ಒಂದು ಶಲ್ಯ ಚಿಕಿತ್ಸೆಯು ಯಾರಲ್ಲಿಯೂ ಇಲ್ಲವೆಂಬುದು ಕಂಡು ಬಂದಿತು. ಆಯುರ್ವೇದ ಪದ್ಧತಿಯಂತೆ ಶಲ್ಯಚಿಕಿತ್ಸೆಯನ್ನು ಪುನಃ ಜಾರಿಗೆ ತಂದು ಅದರಲ್ಲಿ ಕೌಶಲ್ಯವನ್ನು ಪಡೆಯುವದು ಕಷ್ಟಸಾಧ್ಯವಲ್ಲದೆ ಅದಕ್ಕೆ ಸರಕಾರದ ಸಹಾಯವು ಬೇಕೇ ಬೇಕು ಎಂದು ಸ್ಪಷ್ಟವಾಗಿ ತಿಳಿದು ಬಂದಿತು. ಯಾಕಂದರೆ ಪರಕೀಯರ ಆಳ್ವಿಕೆಯಲ್ಲಿ ಕಾನೂನುಗಳಿಂದಲೇ ಅಡ್ಡಿಯಾಗಿತ್ತು. ಈಗಲೂ ಸಹ ಕಾನೂನುಗಳು ಅಷ್ಟಿಷ್ಟಿಲ್ಲ. ಮುಖ್ಯವಾಗಿ ಸ್ಥಳ, ಸಮಯ, ಸಂಪತ್ತು ಈ ಮೂರರಲ್ಲಿ ಅಡ್ಡಿ ಒಂದಿಲ್ಲೊಂದರ ಅಭಾವವು ಎಲ್ಲ ಕಡೆಗೂ ಇರುವದು ಎಂಬದೂ

ಸಹ ತಿಳಿದು ಬಂದಿತು. ಅದಕ್ಕಾಗಿ ಕೋಟ್ಯವಧಿ ರೂಪಾಯಿಗಳು ಬೇಕಾಗುವವು. ಇವುಗಳಲ್ಲಿ ಕನಿಷ್ಠ ಪಕ್ಷಕ್ಕೆ ಲಕ್ಷೋಪಲಕ್ಷರೂಪಾಯಿಗಳನ್ನು ಪ್ರತಿ ವರ್ಷಕ್ಕಾದರೂ ಕೊಡುವದು ಸರಕಾರಕ್ಕೆ ದುಸ್ತರವಾಗಹತ್ತಿತು. ಅದಕ್ಕೆ ಮೊದಲಿನಿಂದಲೂ ಈ ದೇಶದಲ್ಲುಂಟುಮಾಡಿದ ಭೇದನೀತಿಯನ್ನೇ ಈ ಸರಕಾರವು ಅವಲಂಬಿಸಿತು. ಈ ಭೇದನೀತಿವಂತರಲ್ಲಿ ೧) ಎಲೋಪೆಥಿ ಪದ್ಧತಿಯವರು ೨)ಹೆಚ್ಚಾಗಿ ಎಲೋಪೆಥಿಯನ್ನು ಕಲಿತು ಆಯುರ್ವೇದಕ್ಕೆ ಗೌಣಪದ್ಧತಿಯನ್ನು ಕಲ್ಪಿಸುವ ಮಿಶ್ರವಾದಿಗಳು ೩) ಹೊಮಿಯೋಪೆಥಿ ನೆಚರೋಪೆಥಿ, ಯುನಾನಿ; ಈ ಪ್ರಕಾರದ ಮೂರೂ ಪದ್ಧತಿಯವರು ರಾಷ್ಟ್ರದ ಆರೋಗ್ಯಕ್ಕಾಗಿಯೇ ಎಂಬ ಧ್ಯೇಯವಾದವನ್ನು ಇಟ್ಟುಕೊಂಡಿದ್ದರೂ ದ್ವೇಷಾಸೂಯೆಗಳಿಗೆ ಆಸ್ಪದವಾಯಿತು. ಅಂತೆಯೇ ಸರಕಾರಕ್ಕೆ ಮನಸ್ಸಿದ್ದರೂ ಆಯುರ್ವೇದಕ್ಕೆ ಸಹಾಯ ಮಾಡುವದಕ್ಕೆ ಕಾಲವಿಲಂಬವಾಗಹತ್ತಿದೆ.

ಪ್ರಜಾಪ್ರಭುತ್ವವುಳ್ಳ ರಾಷ್ಟ್ರದಲ್ಲಿ ಧರ್ಮ, ಶಾಸ್ತ್ರ, ಕಲಾ, ಮತ್ತು ಸಂಸ್ಕೃತಿಗಳ ಏಳ್ಗೆಗೆ ಪ್ರೋತ್ಸಾಹನವಿರಬೇಕು ಎಂಬದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಈ ಪ್ರೋತ್ಸಾಹನೆಯನ್ನು ದೊರಕಿಸಿಕೊಳ್ಳುವದು, ಪ್ರಜೆಗಳ ಕರ್ತವ್ಯವಾಗಿದೆ. ಪ್ರಜೆ ಮತ್ತು ಸರಕಾರ ಇವುಗಳಲ್ಲಿಯ ದ್ವಂದ್ವವು ಆಚಂದ್ರಾರ್ಕ ಇದ್ದದ್ದೇ ಆಗಿದೆ. "ನರಪತಿಹಿತ ಕರ್ತಾ ದ್ವೇಷ್ಯತಾಂಯಾತಿ ಲೋಕೆ | ಜನಪದಹಿತ ಕರ್ತಾ ತ್ಯಜ್ಯತೇ ಪಾರ್ಥಿವೇನ || ಇತಿ ಮಹತಿ ವಿರೋಧೇ ವರ್ತಮಾನೇ ಸಮಾನೇ | ನೃಪತಿ ಜನಪದಾನಾಂ ದುರ್ಲಭಃ ಕಾರ್ಯಕರ್ತಾ || ಎಂಬ ಸುಭಾಷಿತ ಕಾರನ ವಚನವು ಪ್ರಸಿದ್ಧವಿದೆ. ಪ್ರಜೆಗಳು ಆರಿಸಿ ಕೊಟ್ಟ ಪ್ರತಿನಿಧಿಗಳು ಪ್ರಭುತ್ವವನ್ನು ಹೊಂದುವರು. ಬಳಿಕ ಪ್ರಜೆಗಳ ಅಪೇಕ್ಷೆಗಳನ್ನೂ ಹಿತಾಹಿತಗಳನ್ನೂ ಪ್ರಜೆಗಳಿಂದ ಪ್ರತ್ಯೇಕವಾಗಿ ತಿಳಿದುಕೊಳ್ಳದೆ ತಮ್ಮ ತಮ್ಮ ಮನಬಲ್ಲಂತೆ ವರ್ತಿಸುವರು.

||ಯೌವನಂ ಧನ ಸಂಪತ್ತಿಃ ಪ್ರಭುತ್ವಮವಿವೇಕತಾ| ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಂ || ಎಂಬಂತೆ ಇವರುಗಳಿಗೆ ಬರುವ ಪ್ರಭುತ್ವವು ಅನರ್ಥಕ್ಕೆ ಕಾರಣವಾಗತೊಡಗಿದೆ.

ಇಂಥ ಪರಿಸ್ಥಿತಿಯಲ್ಲಿ ನಿ. ಭಾ. ಆಯುರ್ವೇದ ವಿದ್ಯಾಪೀಠ ಪರೀಕ್ಷೆಗಳು ಅಂದರೆ ಭಿಷಕ್, ವಿಶಾರದ, ಆಚಾರ್ಯ, ಪದವೀ, ಪರೀಕ್ಷೆಗಳು

ಭಾರತದ ಎಲ್ಲ ಭಾಗಗಳಲ್ಲಿ ನಡೆಯಿಸಲ್ಪಡಹತ್ತಿವೆ. ಈ ಪರೀಕ್ಷೆಗಳ ವಿಷಯಗಳೆಂದರೆ:— ಸ್ವಸ್ಥವೃತ್ತ, ರೋಗವಿಜ್ಞಾನ, ಶಾರೀರ, ದ್ರವ್ಯಗುಣ ಶಾಸ್ತ್ರ, ಕಾಯಚಿಕಿತ್ಸೆ, ರಸಶಾಸ್ತ್ರ, ಶಲ್ಯತಂತ್ರ, ಅಗದತಂತ್ರಗಳೆಂದೂ ಕೌಮಾರ, ಭೃತ್ಯ, ಪ್ರಸೂತಿ ತಂತ್ರಗಳೆಂದೂ ಗ್ರಂಥೋಕ್ತ ವಿಷಯವಾರಿ ಪರೀಕ್ಷೆಗಳಾಗ ಹತ್ತಿದವು. ಇದರಿಂದ ಸಂಪೂರ್ಣ ಗ್ರಂಥಗಳಅಧ್ಯಯನವು ನಿಂತು ಹೋಗುವದಲ್ಲದೆ ವಿದ್ಯಾರ್ಥಿಗಳು ಪರೀಕ್ಷೆ ಪಾಸಾಗುವಷ್ಟು ಮಾತ್ರ ಜ್ಞಾನ ಪಡೆಯಲಾರಂಭಿಸಿದರು. ಗ್ರಂಥಗಳ ಕೊರತೆಯಂತೂ ಇದ್ದದ್ದೇ ಇದೆ. ವಿಷಯವಾರಿ ಪಠ್ಯ ಪುಸ್ತಕಗಳೂ ನಿರ್ಮಿತವಾಗಿಲ್ಲ. ಪರೀಕ್ಷೆ ಗಳಂತೂ ಕಡ್ಡಾಯವಾಗಹತ್ತಿದವು. ಆಗ ತತ್ತತ್ಪ್ರಾಂತೀಯ ವೈದ್ಯ ಮಹ ನೀಯರು ಆಯಾಯಾ ಪ್ರಾಂತಿಕ ಭಾಷೆಗಳಲ್ಲಿ ಮೂಲ ಸಂಸ್ಕೃತಗಳ ಭಾಷಾನುವಾದಗಳನ್ನು ಮಾಡತೊಡಗಿದರು. ಆದರೆ ಅವುಗಳ ಪ್ರತ್ಯಕ್ಷ ಕರ್ಮಾಭ್ಯಾಸ ಮಾಡಿಸಲಿಕ್ಕೆ ಮೇಲ್ಕಾಣಿಸಿದಂತೆ ಅಡ್ಡಿಗಳ ನಿವಾರಣೆಗಳು ಈಗಲೂ ಎಲ್ಲ ಕಡೆಗೆ ಆಗಿಲ್ಲ. ಕೀರ್ತಿಶೇಷರಾದ ವಿದ್ವಾನ್ ಕೆ. ಶೇಷ ಶಾಸ್ತ್ರಿಗಳು ಶೃಂಗೇರಿ ಇವರ ಜೊತೆ ಕಾರ್ಯದರ್ಶಿಯಾಗಿ ಭಾರತದ ಎಲ್ಲ ಭಾಗಗಳಲ್ಲಿ ಸಂಚರಿಸಿದ್ದರಿಂದ ಪ್ರತ್ಯಕ್ಷ ಕರ್ಮಾಭ್ಯಾಸ ವಿಲ್ಲವೆಂಬದನ್ನು ಇಲ್ಲಿ ಬರೆಯುವದು ಅಧಿಕೃತವಹುದು. "ಆಯುರ್ವೇದೀಯ ಯಂತ್ರ ಶಸ್ತ್ರ ಪರಿಚಯ" ಎಂಬ ಹೊತ್ತಿಗೆಯನ್ನು ಸನ್ ೧೯೫೭ರಲ್ಲಿ ಆಯುರ್ವೇದಾ ಚಾರ್ಯ ಪಂಡಿತ ಸುರೇಂದ್ರ ಮೋಹನ ಬಿ. ಎ. ಭೂತಪೂರ್ವ ಪ್ರಿನ್ಸಿ ಪಾಲರು ಲಾಹೋರಿನ ನಂದ ಆಯುರ್ವೇದ ಕಾಲೇಜಿನವರು ತಥಾ ಶ್ರೀ ಸತ್ಯೇಂದ್ರನಾಥ ಬಿ. ಎ. (ಆನರ್ಸ) ಈ ಉಭಯ ಮಹನೀಯರು ಮುದ್ರಿಸಿ ಪ್ರಸಿದ್ಧಿಸಿದರು. ಆದರೆ ಅದರಲ್ಲಿ ಆಯುರ್ವೇದದಲ್ಲಿಲ್ಲದ ವಿಷಯ ಗಳನ್ನೂ ಪ್ರತಿಪಾದಿಸಿರುವರು. ಯಂತ್ರ ಶಸ್ತ್ರಗಳ ಚಿತ್ರಗಳನ್ನು ಈ ಮೊದಲು ಬೇರೆಬೇರೆ ಪ್ರಾಂತೀಯ ಭಾಷೆಯವರು ಮುದ್ರಿಸಿದವುಗಳನ್ನೇ ಹಾಕಿ ಕೊಂಡಿರುವರು. ಈ ಪುಸ್ತಕದಲ್ಲಿಯೂ ಸಹ ನಾವು ಬೇರೆ ಚಿತ್ರಗಳನ್ನು ನೋಡಿ ಬರೆಯಿಸಿ ಪ್ರತ್ಯೇಕವಾಗಿ ಪಡಿಯಚ್ಚುಗಳನ್ನು ಮಾಡಿಸಿಯೇ ಮುದ್ರಿಸಿ ಕೊಂಡಿರುತ್ತೇವೆ.

ಸಾಂಪ್ರತ ಯಂತ್ರ ಶಸ್ತ್ರಗಳನ್ನು ಉಪಯೋಗಿಸಿ ಕರ್ಮಾಭ್ಯಾಸ ವನ್ನೂ ಮಾಡಿ ಪ್ರತ್ಯಕ್ಷ ತಮ್ಮ ತಮ್ಮ ಚಿಕಿತ್ಸಾಲಯಗಳಲ್ಲಿ ಮಾಡುವವರು

ಸಹ ಶಸ್ತ್ರಕರ್ಮದ ಪ್ರಸಂಗ ಬಂದಾಗೆಲ್ಲ ಬೇರೊಬ್ಬ ಶಸ್ತ್ರಕರ್ಮ ಪ್ರಧಾನ ಚಿಕಿತ್ಸಕರಿಂದಲೇ ಮಾಡಿಸುತ್ತಿರುವರು. ಇಂಥ ರೋಗಿಗಳೂ ಸಹ ಕ್ಷಿಪ್ರ ಚಿಕಿತ್ಸೆ ಹೊಂದಿ ಗುಣವಾಯಿತೆಂದು ತಿಳಿದು ಬರುವಷ್ಟರಲ್ಲಿಯೇ ನರಳುತ್ತಾ ಸ್ವಾಸ್ಥ್ಯವಿಲ್ಲದವರಾಗಿರುವರು. ಅವರು "ಜೀವಂತ ಹೆಣ" ವೆಂದೆನಿಸುವಂಥವರಾಗಿರುವರು. ಅಂತೆಯೇ ನಾವು ಅದಕ್ಕೆ "ಅಥಮಃ ಶಸ್ತ್ರ ದಾಹಾಭ್ಯಾಮ್" ಎಂದು ಹೇಳುತ್ತಿದ್ದೇವೆ. ಅದಲ್ಲದೆ ರಸ ಗ್ರಂಥಕಾರರ ಈ ಉಕ್ತಿಯನ್ನೇ ನಾವು ಹೇಳುತ್ತಿದ್ದೇವೆ. ತಾತ್ಪರ್ಯ:- ಬೇರೊಂದು ಪೇಥಿಯವರು ಸಹ ಶಸ್ತ್ರ ಕರ್ಮಗಳನ್ನು ಮಾಡಿ ಮನುಷ್ಯನನ್ನು ಯಾವಜ್ಜೀವ ಸುಖಿಯನ್ನಾಗಿ ಮಾಡಲು ಸಮರ್ಥರಾಗಿಲ್ಲವೆಂಬದನ್ನು ಸುಸೂಕ್ಷ್ಮ ನಿರೀಕ್ಷಿಸುವ ಪ್ರಾಮಾಣಿಕರಿಗೆ ತಿಳಿದು ಬರುವಂತಿದೆ. ಅಂಥ ರೋಗಗಳು ಬಾರದಂತೆ ಇರುವಿಕೆಯನ್ನು ಹೇಳಿದ ಹಿರಿಮೆಯೂ ಹೆಮ್ಮೆಯೂ ಆಯುರ್ವೇದಕ್ಕೆ ಇದ್ದೇಇದೆ. ಫಕ್ತ ಅನುಸರಿಸುವದೂ ಅನುಸರಿಸಲಿಕ್ಕೆ ಹಚ್ಚುವದೂ ಪ್ರಜಾ ಪ್ರಭುತ್ವದ ಕರ್ತವ್ಯವೆನಿಸುತ್ತದೆ. ಇದು ವಿದ್ಯಾರ್ಥಿಗಳ ಕರ್ತವ್ಯವೂ. ಶಿಕ್ಷಕರ ಕರ್ತವ್ಯವೂ ಏತದ್ದೇಶೀಯ ಪ್ರಜೆಗಳ ಕರ್ತವ್ಯವೂ ಆಹುದು.

ಈ ಪುಸ್ತಕವು ಅಭ್ಯಾಸಕ್ಕೆ ಸಹಾಯವಾಗಲೆಂದು ಬರೆದಿದ್ದೇವೆ; ವ್ಯಾಪಾರಕ್ಕಾಗಿ ಅಲ್ಲವೆಂಬುದನ್ನು ಒತ್ತಿ ಹೇಳುತ್ತೇವೆ. ಇದನ್ನು ಅರಿತ ಮಹನೀಯರಾದ ಶ್ರೀ ಬೆಂಗೇರಿ ಇವರು ಅಲ್ಪಬೆಲೆಯಲ್ಲಿ ಪಡಿಯಚ್ಚುಗಳನ್ನು ಮಾಡಿಕೊಟ್ಟಿರುವರು. ಅದಲ್ಲದೆ ಪರಮ ಕಾರುಣಿಕ ಪೈತ್ರೀಕರಣವುಳ್ಳವರೂ ಆಯುರ್ವೇದದಲ್ಲಿ ತುಂಬಾ ಶ್ರದ್ಧೆಯನ್ನಿಟ್ಟುಕೊಂಡವರೂ ಆದ ಆಶಾ ಮುದ್ರಣಾಲಯದ ಒಡೆಯರಾದ ಎಸ್. ಎಸ್. ಕಾರಂತರವರು ಮಾಡಿರುವ ಈ ಆಯುರ್ವೇದ ಸೇವೆಯನ್ನು ಉಪಕೃತಿವತಿಯಿಂದ ಸ್ವೀಕರಿಸುತ್ತೇವೆ.

ಈ ವರೆಗಿನ ಮೂವತ್ತು ವರ್ಷಗಳ ಅಧ್ಯಾಪನ ವೃತ್ತಿಯಕಾಲದಲ್ಲಿ ಶಿಷ್ಯರನೇಕರು ಈ ನ್ಯೂನ ಗಂಡವನ್ನು ಸ್ವೀಕರಿಸಿಯೂ ತಮ್ಮ ತಮ್ಮ ಶ್ರದ್ಧೆ ಭಕ್ತಿ ನಿಷ್ಠೆ ವಿಶ್ವಾಸಗಳನ್ನು ಅದ್ಯಾವತ್ ಆತ್ರೇಯ ಸದನದಲ್ಲಿಟ್ಟುಕೊಂಡಿರುವದರಿಂದ ಅವರೆಲ್ಲರೂ ಭಗವಾನ್ ಶ್ರೀ ಧನ್ವಂತರಿಯ ಕೃಪೆಗೆ

ಪಾತ್ರರಾಗಿರುವರು. ಶಿಷ್ಯದ್ವಯರಾದ ಪುಂಡಲೀಕ ಶಂಕರ ಪೈ ಮತ್ತು ಹುಬ್ಬಳ್ಳಿಯ ಸರಕಾರಮಾನ್ಯ ಶುದ್ಧ ಆಯುರ್ವೇದ ವಿದ್ಯಾಲಯದಲ್ಲಿಯ ವಿದ್ಯಾರ್ಥಿಗಳು ಸದಾನಂದ ಶಂಕರ ಪೈ ಇವರು ಪ್ರೂಫ್ ನೋಡುವದೇ ಮೊದಲಾದ ಎಲ್ಲ ಕಾರ್ಯಕ್ಕೆ ಪರಿಶ್ರಮ ಪಟ್ಟಿರುವರು. ಅವರಿಗೆ ಆಯು ರ್ವೇದದ ಎಲ್ಲ ವಿದ್ಯೆಗಳು ಪ್ರಾಪ್ತವಾಗಲೆಂದು ನನ್ನ ಕುಲ ಪ್ರವರ್ತಕ ಆತ್ರೇಯಮಹರ್ಷಿಗಳನ್ನು ಸ್ಮರಿಸಿ ಭಗವಾನ್ ಶ್ರೀ ಧನ್ವಂತರಿಯನ್ನು ಪ್ರಾರ್ಥಿಸುತ್ತೇನೆ.

ಶ್ರೀ ಶಕೆ ೧೮೭೮ ದುರ್ಮುಖನಾಮ ಸಂವತ್ಸರದ ಮಾರ್ಗಶೀರ್ಷ ಶುದ್ಧ ೩ ದಿನಾಂಕ ೮—೧೨—೫೬ ಶನಿವಾರ

ಡಾ. ಅ. ಹಲಸೀಕರ
ಆತ್ರೇಯ ಸದನ ಆಯುರ್ವೇದ
ಪಾಠಶಾಲಾ, ಹುಬ್ಬಳ್ಳಿ



ಪ್ರಕರಣ ವಿಷಯಾನುಕ್ರಮಣಿಕೆ ಪುಟ

## ಪ್ರಥಮಾಧ್ಯಾಯ

## ಮೂರನೇ ಅಧ್ಯಾಯ

# I

# ಜಲೂಕಾವಚರಣ ವಿಧಿ

ಜಿಗಳೆಯುಪರ್ಯಾಯ:ನಾಮಗಳು:- ರಕ್ತಪಾ, ಜಲೂಕಾ, ಜಲೌಕಾ ಜಲೋಕಾ, ಜಲಜಂತುಕಾ ಇವು ಪರ್ಯಾಯ ಹೆಸರುಗಳಿರುವವು. ಕನ್ನಡದಲ್ಲಿ ಜಿಗಳೆ, ಚಿಗಳೆ, ಜವಳೆ ಎಂದು ಕರೆಯುವರು. ಮರಾಠಿಯಲ್ಲಿ ಜಳವಾ ಎನ್ನುವರು. ಹಿಂದೀ ಭಾಷೆಯಲ್ಲಿ ಜೌಂಕ ಎನ್ನುವರು.

ಜಿಗಳೆಗಳು ಜಲಾಶಯದಲ್ಲಿ ಉತ್ಪತ್ತಿಹೊಂದಿ ಅಲ್ಲಿಯೇ ವಾಸಮಾಡಿಕೊಂಡಿರುವ ಪ್ರಾಣಿಗಳಾಗಿರುತ್ತವೆ. ಅದನ್ನೇ ಮಹರ್ಷಿಸುಶ್ರುತಾಚಾರ್ಯರು ಈ ರೀತಿಯಾಗಿ ಹೇಳಿರುವರು.

೧. ಜಲಮ್ ಆಸಾಮ್ ಆಯುರಿತಿ ಜಲಾಯುಕಾಃ ।
೨. ಜಲಮ್ ಆಸಾಮ್ ಓಕ ಇತಿ ಜಲೌಕಸಃ ॥

ಅಂದರೆ ಜಲವೇ ಈ ಪ್ರಾಣಿಗಳ ಜೀವಾಳವಾಗಿರುವದು; ಇಲ್ಲವೆ ಜಲಾಶಯುವೇ ಈ ಪ್ರಾಣಿಗಳ ವಾಸಸ್ಥಾನವಾಗಿರುವದು, ಎಂದು ತಾತ್ಪರ್ಯಾರ್ಥವು.

ಭಗವಾನ್ ಶ್ರೀ ಧನ್ವಂತರಿಯು ತನ್ನ ಕೆಳ ಬಲಗೈಯಲ್ಲಿ ನಿಷ್ಕಲ್ಮಷವಾದ ಅಮೃತ ಕುಂಭವನ್ನೂ ಕೆಳವಾಮಹಸ್ತದಲ್ಲಿ ಜಿಗಳೆಯನ್ನೂ ಧರಿಸಿರುವನು. ಕಾರಣ ಆಯುರ್ವೈದಿಕರಿಗೆ ಇದು ಪೂಜ್ಯ ವಸ್ತುವಾಗಿರುವದು. ಇದು ಅನೂಪ ಪ್ರದೇಶದ ಕೆರೆ ಸರೋವರಾದಿಗಳಲ್ಲಿ ದೊರೆಯುತ್ತದೆ.

ಜಿಗಳೆಯು ಸುಲಕ್ಷಣದಿಂದಲೂ ತ್ರಿರಿಂದ್ರಿಯದಿಂದಲೂ ತ್ರಿದೋಷದಿಂದಲೂ ಕೂಡಿರುವದು. ಮುಖ, ಗುದ, ಚರ್ಮವೆಂಬ ಮೂರು ಇಂದ್ರಿಯಗಳಿರುವವು. ಮುಖದಲ್ಲಿ ವಾಯು, ಗುದದಲ್ಲಿ ಕಫ ಮತ್ತು ಚರ್ಮದಲ್ಲಿ ಪಿತ್ತ ಇವುಗಳಿಂದ ಕೂಡಿರುವದು.

ನಮ್ಮ ಶಾಸ್ತ್ರಕಾರರು ಹನ್ನೆರಡು ಪ್ರಕಾರದ ಜಿಗಳೆಗಳು ಈ ಸೃಷ್ಟಿಯಲ್ಲಿ ಇರುವವೆಂದು ಹೇಳಿರುತ್ತಾರೆ. ಅವುಗಳಲ್ಲಿ ನಿರ್ವಿಷ ಜಿಗಳೆಗಳು

ಆರು ಜಾತಿಯವು. ಮತ್ತು ಸವಿಷ ಜಿಗಳೆಗಳು ಆರುಜಾತಿಯವು ಎಂದು ವಿಭಾಗಿಸಿರುತ್ತಾರೆ.

ಕಮಲ, ಉತ್ಪಲ, ನಳಿನ, ಸೌಗಂಧಿಕ, ಕೆಂಪುಕಮಲ, ಶ್ವೇತಕಮಲ ಹಾಂವಸೆ ಇವುಗಳ ಕೋಥದಿಂದ ಉದ್ಭವಿಸಿದವುಗಳು ಮತ್ತು ಆಳವಾದ ಹಾಗೂ ನಿರ್ಮಲವಾದ ನೀರಿನಲ್ಲಿ ವಾಸವಾಗಿರುವಂಥವುಗಳು, ನಿರ್ವಿಷ ಜಿಗಳೆಗಳೆಂದು ತಿಳಿಯಬೇಕು.

ಕಪಿಲಾ, ಪಿಂಗಲಾ, ಶಂಕುಮುಖೀ, ಮೂಷಿಕಾ, ಪುಂಡರೀಕ ಮುಖೀ, ಮತ್ತು ಸಾವರಿಕಾ ಈ ಆರು ಜಾತಿಯ ಜಲೂಕಾಗಳು ನಿರ್ವಿಷ ಜಿಗಳೆಗಳೆನಿಸುವವು.

ಕಪಿಲಾ ಜಾತಿಯ ಜಿಗಳೆಯ ಪಾರ್ಶ್ವಗಳೆರಡೂ ಮನಃಶಿಲಾವರ್ಣ ದವುಗಳು, ಮತ್ತು ಪೃಷ್ಠಭಾಗವು ಸ್ನಿಗ್ಧವಿದ್ದು ಮುದ್ಗವರ್ಣದ್ದಿರುವದು.

ಪಿಂಗಲಾ ಜಾತಿಯ ಜಿಗಳೆಯು ಸ್ವಲ್ಪ ರಕ್ತವರ್ಣದ್ದು, ಗೋಲಾ ಕೃತಿಯದು, ಪಿಂಗಲ ವರ್ಣದ್ದಿದ್ದು, ತೀವ್ರಗಾಮಿಯಾಗಿರುವದು.

ಶಂಕುಮುಖೀ ಜಾತಿಯ ಜಿಗಳೆಯು ಯಕೃತ್ತಿಗೆ ಸಮಾನವಾದ ವರ್ಣದ್ದು ಶೀಘ್ರವಾಗಿ ರಕ್ತಪಾನಮಾಡುವಂತಹದು, ದೀರ್ಘ ಮತ್ತು ತೀಕ್ಷ್ಣವಾದ ಮುಖವುಳ್ಳದ್ದಾಗಿರುವದು.

ಮೂಷಿಕಾ ಜಾತಿಯ ಜಿಗಳೆಯು ಇಲಿಗೆ ಸದೃಶವಾದ ವರ್ಣ ಮತ್ತು ಆಕಾರದ್ದಿದ್ದು ಅನಿಷ್ಟ ಗಂಧದ್ದಾಗಿರುವದು.

ಪುಂಡರೀಕಮುಖೀ ಜಾತಿಯ ಜಿಗಳೆಯು ಮುದ್ಗ ವರ್ಣದ್ದಿದ್ದು ಕಮಲಕ್ಕೆ ಸಮಾನವಾದ ಮುಖವುಳ್ಳದ್ದಾಗಿರುವದು.

ಸಾವರಿಕಾ ಜಾತಿಯ ಜಿಗಳೆಯ ದೇಹವು ಸ್ನಿಗ್ಧವಿದ್ದು ಕಮಲ ಪತ್ರಕ್ಕೆ ಸಮಾನವಾದ ವರ್ಣದ್ದಾಗಿರುವದು. ಮತ್ತು ದೇಹದ ಉದ್ದಳ.

ತಿಯು ಹದಿನೆಂಟು ಅಂಗುಲ ಪ್ರಮಾಣವಿರುವದು. ಈ ಜಾತಿಯ ಜಿಗಳೆಗಳನ್ನು ಆನೆ, ಕುದುರೆ, ಇತ್ಯಾದಿ ಪಶುಗಳ ರಕ್ತ ಮೋಕ್ಷಣಕಾರ್ಯಕ್ಕಾಗಿ ಉಪಯೋಗಿಸುವರು.

ವೈದ್ಯಪತಿ ಶ್ರೀ ಮದ್ವಾಗ್ಭಟಾಚಾರ್ಯರು ನಿರ್ವಿಷ ಜಿಗಳೆಗಳ ಲಕ್ಷಣಗಳನ್ನು ಈ ಕೆಳಗೆ ವಿವರಿಸಿದಂತೆ ಹೇಳಿರುವರು.

ಹಾಂವಸೆಗೆ ಸಮಾನವಾದ ಶ್ಯಾಮ ವರ್ಣದವುಗಳು, ನಿರ್ಮಲವಾದ ಜಲಾಶಯದಲ್ಲಿ ಹುಟ್ಟಿದಂಥವುಗಳು, ಸ್ವಲ್ಪದುಂಡಗೆ ಇದ್ದು ಮೈಮೇಲೆ ನೀಲವರ್ಣದ ರೇಖೆಗಳುಳ್ಳವು, ಕಷಾಯ ವರ್ಣದ ಪೃಷ್ಠಗಳುಳ್ಳವುಗಳು, ತನು ಶರೀರಗಳು ಮತ್ತು ಹೊಟ್ಟೆಯ ಭಾಗವು ಈಷತ್ ಪೀತ ವರ್ಣವುಳ್ಳಂಥವುಗಳು, ಈ ಎಲ್ಲ ಲಕ್ಷಣಯುಕ್ತ ಜಿಗಳೆಗಳು ನಿರ್ವಿಷಗಳೆಂದು ತಿಳಿದು ಅವುಗಳನ್ನು ರಕ್ತ ಮೋಕ್ಷಣಕಾರ್ಯಕ್ಕೆ ಉಪಯೋಗಿಸಬೇಕು.

ಕೃಷ್ಣಾ, ಕರ್ಬುರಾ, ಅಲಗರ್ದಾ, ಇಂದ್ರಾಯುಧಾ, ಸಾಮುದ್ರಿಕಾ ಗೋಚಂದನಾ ಈ ಆರು ಜಾತಿಯ ಜಿಗಳೆಗಳು ಸವಿಷಗಳಾಗಿದ್ದು ಇವುಗಳನ್ನು ರಕ್ತ ಮೋಕ್ಷಣಕಾರ್ಯಕ್ಕೆ ಎಂದೆಂದಿಗೂ ಉಪಯೋಗಿಸಬಾರದು. ಯಾಕಂದರೆ ಇವುಗಳ ಉತ್ಪತ್ತಿಯು ವಿಷಯುಕ್ತ ಹಾವು ಕೀಟ ಮತ್ಸ್ಯ ಮತ್ತು ಮಲ ಮೂತ್ರಾದಿಗಳ ಕೋಥದಿಂದ ಆದದ್ದಿರುತ್ತದೆ.

ಶ್ರೀ ಮದ್ವಾಗ್ಭಟಾಚಾರ್ಯರು ಜಿಗಳೆಗಳನ್ನು ಅಲೋಹ ನಿರ್ಮಿತ ಅನು ಶಸ್ತ್ರಗಳಲ್ಲಿ ಗಣನೆ ಮಾಡಿರುವರು. ಇದಲ್ಲದೆ ಅವುಗಳ ಪಾಲನ ಪೋಷಣಾದಿ ವಿಧಿಗಳನ್ನೂ ಹಾಗೂ ಆಯುರ್ವೈದಿಕರಿಗೆ ಅವುಗಳಿಂದಾಗುವ ಅಮೂಲ್ಯವಾದ ಲಾಭವನ್ನೂ ಸುವಿಶದವಾಗಿ ವರ್ಣಿಸಿರುವರು. ನಮ್ಮ ಶಾಸ್ತ್ರಕಾರರು ಜಲೂಕಾಗಳನ್ನು ದೇಹದಲ್ಲಿಯ ಅನೇಕ ಸ್ಥಾನಗಳಲ್ಲಿರುವ ದುಷ್ಟ ಶೋಣಿತ ನಿರ್ಹರಣಾರ್ಥವಾಗಿ ಹೇಳಿರುವರು. ಇದಲ್ಲದೆ ರಾಜರುಗಳು ಶ್ರೀಮಂತರು, ವೃದ್ಧರು, ಭೀರುಗಳು, ದುರ್ಬಲರು, ಸ್ತ್ರೀಯರು, ಬಾಲಕರು ಮತ್ತು ಸುಕುಮಾರಿಗಳು ಇವರೆಲ್ಲರ ರಕ್ತಮೋಕ್ಷಣ ಕಾರ್ಯಕ್ಕಾಗಿ ಜಿಗಳೆಗಳನ್ನೇ ಉಪಯೋಗಿಸಬೇಕೆಂದು ಹೇಳಿರುವರು. ಯಾಕಂದರೆ

ಈ ಮೇಲಿನ ಪ್ರಕೃತಿಯ ಜನರು ಶೃಂಗ, ಅಲಾಬು, ಸಿರಾವ್ಯಧನಾ
ಕಾರ್ಯಗಳಿಂದ ರಕ್ತಮೋಕ್ಷಣಕ್ಕೆ ಅನರ್ಹರಾಗಿರುವರು.

ವಾಗ್ಭಟಾಚಾರ್ಯರೂಕೂಡಾ, ವಿಶೇಷವಾಗಿ ಪಿತ್ತದೋಷ ದುಷ್ಟಿ
ಯಾದ ಶೋಣಿತ ಹಾಗೂ ಕರ್ಣ, ಗುದಪ್ರದೇಶ, ತಾಲುಪ್ರದೇಶ, ನಾಸಿ
ಕಾದ ಒಳಭಾಗ ಇತ್ಯಾದಿ ಅವಗಾಢ ಪ್ರದೇಶದಲ್ಲಿರುವ ದುಷ್ಟ ಶೋಣಿತ
ವನ್ನು ಜಲೂಕಾಗಳಿಂದಲೇ ನಿರ್ಹರಣ ಮಾಡಲು ಸಾಧ್ಯವೆಂದು
ಹೇಳಿರುವರು.

### ಜಲೂಕಾಗಳನ್ನು ಹಿಡಿಯುವಕ್ರಮ.

ನಿರ್ವಿಷವಾದ ಜಿಗಳೆಗಳನ್ನು ಶರತ್ಕಾಲದಲ್ಲಿ ಆರ್ದ್ರ ಚರ್ಮದ ನೆರವಿ
ನಿಂದ ಇಲ್ಲವೆ ಸದ್ಯೋಹತ ಪ್ರಾಣಿಗಳ ಮಾಂಸಪೇಶೀಯುಕ್ತ ಜಂಘಾದಿ
ಅವಯವಗಳ ಸಹಾಯದಿಂದ ಹಿಡಿಯಬೇಕು. ಆ ಬಳಿಕ ಹೊಸದಾದ
ಗಡಿಗೆಯಲ್ಲಿ ಕೆರೆ ಸರೋವರಗಳ ನೀರನ್ನು ಮತ್ತು ಸ್ವಲ್ಪ ಕೆಸರನ್ನು ಹಾಕಿ
ಅದರಲ್ಲಿ ಈ ಜಿಗಳೆಗಳನ್ನು ಸಾಕಬೇಕು. ಜಿಗಳೆಗಳಿಗೆ ಭಕ್ಷ್ಯಾರ್ಥವಾಗಿ
ಜಲಚರಪ್ರಾಣಿಗಳ ಶುಷ್ಕಮಾಂಸ, ಹಾಂವಸೆ, ವಿಷಾರಿಕಂದಾದಿಗಳ
ಚೂರ್ಣವನ್ನು ಪ್ರತಿನಿತ್ಯ ಪೂರೈಸಬೇಕು. ಶಯನಾರ್ಥವಾಗಿ ತೃಣ,
ಕಮಲ ಪತ್ರಗಳನ್ನು ಒದಗಿಸಬೇಕು. ೨-೩ ದಿನಕ್ಕೊಮ್ಮೆ ಹೊಸ ಹೊಸ
ನೀರನ್ನು ಹಾಕುತ್ತಿರಬೇಕು. ಆರು ಏಳು ದಿನಕ್ಕೊಮ್ಮೆ ಗಡಿಗೆಯನ್ನು
ಬದಲಾಯಿಸಬೇಕು. ಈ ರೀತಿ ಜಿಗಳೆಗಳ ಪಾಲನ ಪೋಷಣಾದಿಗಳನ್ನು
ಮಾಡಬೇಕು.

ಈಗ ಸದ್ಯ ಜಿಗಳೆಗಳು ಭಾರತದ ಅನೂಪ ಪ್ರದೇಶದಲ್ಲಿರುವ ಕೆರೆ
ಸರೋವರಾದಿ ಜಲಾಶಯಗಳಲ್ಲಿ ದೊರೆಯುವವು. ಇದಲ್ಲದೆ ನಮ್ಮ ಕರ್ನಾ
ಟಕದಲ್ಲಿಯ ಮಲೆನಾಡು ಪ್ರದೇಶಗಳಲ್ಲಿಯೂ ಕೂಡಾ ಜಲೂಕಾ
ಸಂಪತ್ತು ಸದಾಕಾಲ ಹೇರಳವಾಗಿ ದೊರೆಯುತ್ತದೆ.

V

## ಜಲೂಕಾ ಪ್ರಯೋಗ ವಿಧಿ

ಶರದ್ ಹೇಮಂತ ಋತುಗಳಲ್ಲಿ ಜಲೂಕಾಗಳಿಂದ ರಕ್ತ ಮೋಕ್ಷಣ ಕಾರ್ಯವನ್ನು ಶಾಸ್ತ್ರಕಾರರು ಹೇಳಿರುವರು. ಈ ಋತುಗಳಲ್ಲಾದರೂ ಕೂಡಾ ವಾತಾವರಣವು ಅತಿಬಿಸಿಲು, ಮಳೆ, ಮೋಡಾದಿಗಳಿಂದ ಕಲುಷಿತ ವಾದರಂತೂ ಜಲೂಕಾವಚರಣವನ್ನು ಮಾಡಲೇಬಾರದು. ಇನ್ನು ಆತ್ಯಯಿಕ ಪ್ರಸಂಗಗಳಲ್ಲಿ ಕುಶಾಗ್ರ ಬುದ್ಧಿಯವರಾದ ಆಯುರ್ವೇದೀಯರು ತಮ್ಮ ಬುದ್ಧಿ ಚಾತುರ್ಯದಿಂದ ದೋಷ, ದೂಷ್ಯಾದಿಗಳನ್ನು ಚೆನ್ನಾಗಿ ವಿಚಾರಿಸಿ, ಯೋಗ್ಯ ವೇಳೆಗೆ, ಇನ್ನುಳಿದ ಶಿಶಿರ ವಸಂತಾದಿ ಋತುಗಳಲ್ಲಿಯೂ ಕೂಡ, ಜಿಗಳೆಗಳಿಂದ ರಕ್ತಮೋಕ್ಷಣ ಮಾಡಬಹುದಾಗಿ ಅಭಿಪ್ರಾಯ ಪಡುತ್ತೇವೆ. ಜಲೂಕಾ ಸಾಧ್ಯವಾದ ರೋಗದಲ್ಲಿ ಮೊದಲಿಗೆ ನಿರ್ವಿಷವಾದ ಜಿಗಳೆಯನ್ನು ಹರಿದ್ರಾ ಕಲ್ಕದ ನೀರಿನಿಂದ ಅಥವಾ ಮಜ್ಜಿಗೆಯಿಂದ ಸ್ವಚ್ಛವಾಗಿ ತೊಳೆದು ಅದಕ್ಕೆ ಚಾಪಲ್ಯ ಬರುವವರೆಗೆ ಒಂದು ತಣ್ಣೀರಿನ ಪಾತ್ರೆಯಲ್ಲಿ ಹಾಕಿಡಬೇಕು. ಬಳಿಕ ರೋಗಿಯನ್ನು ಆಸನದಲ್ಲಿ ಕೂಡ್ರಿಸಿ ಇಲ್ಲವೆ ಮಲಗಿಸಿ, ರೋಗವಿದ್ದ ಸ್ಥಾನಕ್ಕೆ ಆ ಜಿಗಳೆಯನ್ನು ಹಚ್ಚಬೇಕು. ಅದು ಗ್ರಹಣ ಮಾಡದಿದ್ದಲ್ಲಿ ಆ ಸ್ಥಾನಕ್ಕೆ ಕ್ಷೀರ ಬಿಂದು ಇಲ್ಲವೆ ಘೃತ ಬಿಂದುವನ್ನು ಲೇಪಿಸಿ ಹಿಡಿಸುವ ಪ್ರಯತ್ನ ಮಾಡಬೇಕು. ಅದರ ಮುಖ ಭಾಗವು "ಅಶ್ವಖುರವತ್" ಅಂದರೆ ಕುದುರೆಯ ಗೊರಸಿನಂತೆ ಆಯಿತೆಂದರೆ ಅದು ರಕ್ತ ಹೀರಲು, ಪ್ರಾರಂಭಿಸಿದೆಯೆಂದು ತಿಳಿಯಬೇಕು. ಬಳಿಕ ಮೃದುವಾದ ಆರ್ದ್ರ ಬಟ್ಟೆಯಿಂದ ಅದರ ಮೈಯನ್ನು ಆಚ್ಛಾದಿಸಬೇಕು.

ಜಿಗಳೆಯು ದೇಹದಲ್ಲಿಯ ದುಷ್ಟ ರಕ್ತವನ್ನಷ್ಟೆ ಹೀರುವದೆಂಬುವದಕ್ಕೆ ನಿದರ್ಶನವು.

ಸಂಪೃಕ್ತಾದ್ದುಷ್ಟ ಶುದ್ಧಾಸ್ರಾಜ್ಜಲೌಕಾ ದುಷ್ಟಶೋಣಿತಮ್ ।
ಆದತ್ತೆ ಪ್ರಥಮಂ ಹಂಸಃ ಕ್ಷೀರಮ್ ಕ್ಷೀರೋದಕಾದಿವ ॥೪೩॥

ವಾ. ಸೂ. ಅ. ೨೬

ಗುಲ್ಮಾರ್ಶೋವಿದ್ರಧೀನ್ ಕುಷ್ಠವಾತರಕ್ತಗಲಾಮಯಾನ್ ।
ನೇತ್ರರುಗ್ವಿಷ ವೀಸರ್ಪಾನ್ ಶಮಯಂತಿ ಜಲೌಕಸಃ ॥

ಹಂಸಪಕ್ಷಿಯು ಹೇಗೆ ಹಾಲು ನೀರುಗಳ ಮಿಶ್ರಣದಿಂದ ಹಾಲನ್ನಷ್ಟೇ ಬೇರ್ಪಡಿಸಿ ಕುಡಿಯುವದೋ ಅದೇ ರೀತಿಯಾಗಿ ಜಿಗಳೆಯೂ ಕೂಡಾ ಮೊದಲಿಗೆ ದುಷ್ಟ ರಕ್ತವನ್ನಷ್ಟೇ ಹೀರುತ್ತದೆ. ಇದಲ್ಲದೆ ಜಲೂಕಾದಿಂದ ರಕ್ತ ಮೋಕ್ಷಣ ಮಾಡುವದರಿಂದ ಗುಲ್ಮ ರೋಗಗಳು, ಮೂಲವ್ಯಾಧಿಗಳು, ಹದಿನೆಂಟು ಪ್ರಕಾರದ ಕುಷ್ಠಗಳು, ವಾತ ರಕ್ತ ವಿಕಾರಗಳು, ಕಂಠರೋಗ ಗಳು, ಅನೇಕ ಪ್ರಕಾರದ ನೇತ್ರ ರೋಗಗಳು, ವಿಷಜನ್ಯ ವಿಕಾರಗಳು ಹಾಗೂ "ವೀಸರ್ಪಾದಿ" ಇನ್ನೂ ಎಷ್ಟೋ ವಿಕಾರಗಳು ಶಮನವಾಗುತ್ತವೆ.

ಸಾಕಷ್ಟು ದುಷ್ಟ ರಕ್ತವನ್ನು ಹೀರಿದ ಬಳಿಕ ಜಿಗಳೆಯು ತಾನಾ ಗಿಯೇ ಆ ಸ್ಥಾನವನ್ನು ಬಿಟ್ಟು ಬಿಡುತ್ತದೆ. ಆಗ ಅದನ್ನು ಹರಿದ್ರಾ ಚೂರ್ಣದಿಂದ ಲೇಪಿಸಿ ರಕ್ತವನ್ನೆಲ್ಲ ವಮನ ಮಾಡಿಸಬೇಕು. ಬಳಿಕ ಸ್ವಚ್ಛವಾಗಿ ತೊಳೆದು ಪ್ರತ್ಯೇಕವಾದ ಗಡಿಗೆಯಲ್ಲಿ ಹಾಕಿ ಈ ಮೊದಲೆ ಹೇಳಿದಂತೆ ಜೋಪಾನ ಮಾಡಬೇಕು. ರಕ್ತವನ್ನು ಯೋಗ್ಯವಾಗಿ ವಮನ ಮಾಡದಿದ್ದಲ್ಲಿ ಜಿಗಳೆಗಳಿಗೆ ಇಂದ್ರ ಮದವೆಂಬ ರೋಗಗಳಾಗಿ ಇಲ್ಲವೆ ಇನ್ನೂ ಕೆಲ ದುಷ್ಟ ವಿಕಾರಗಳಾಗಿ ಸಾಯುವ ಸಂಭವವಿದೆ. ಒಮ್ಮೆ ರಕ್ತಮೋಕ್ಷ ಣಕ್ಕೆ ಉಪಯೋಗಿಸಿದ ಜಿಗಳೆಯನ್ನು ಒಂದು ವಾರಕ್ಕಿಂತ ಮೊದಲು ಎರ ಡನೇ ಸಲ ರಕ್ತಮೋಕ್ಷಣ ಕಾರ್ಯಕ್ಕೆ ಉಪಯೋಗಿಸಬಾರದು.

## ಚಿಕಿತ್ಸಾ ಕ್ಷೇತ್ರದಲ್ಲಿ ಜಿಗಳೆಗಳಿಂದ ನಮಗೆ ಬಂದ ಅನುಭವಗಳು

(೧) ಕರ್ಕಟ ಗ್ರಂಥಿಯುಳ್ಳ ಸ್ಥಾನಕ್ಕೆ ಜಿಗಳೆಗಳಿಂದ ರಕ್ತಮೋಕ್ಷಣ ಮಾಡಲಾಗಿ ಉಪಶಯ ಕಂಡು ಬಂದಿದೆ.

(೨) ಅಸ್ರಾಭಿನೋದನ ( Blood Pressure ) ರೋಗಿಗಳಿಗೆ ೪-೬ ಸಲ ಜಲೂಕಾದಿಂದ ರಕ್ತ ಸ್ರುತಿ ಮಾಡಲಾಗಿ ಗುಣ ತೋರಿಬಂದಿದೆ.

(೩) ಮಧುಮೇಹಿ ರೋಗಿಗೆ ಬಂದ ಪಾದ ಶೋಥಕ್ಕೆ ರಕ್ತಮೋಕ್ಷಣ ಮಾಡಲಾಗಿ ಪಾದ ಶೋಥವು ಕಡಿಮೆಯಾಗಿರುತ್ತದೆ.

(೪) ಅತಿ ಪುರಾಣವಾದ ಸಂಧಿವಾತ ಮತ್ತು ಮಧುಮೇಹವುಳ್ಳ ರೋಗಿಯ ಜಾನುಶೋಫಕ್ಕೆ ರಕ್ತಮೋಕ್ಷಣ ಮಾಡಲಾಗಿ ಆ ರೋಗಿಯು ನಡೆದಾಡಲು ಪ್ರಾರಂಭಿಸಿರುವನು.

(೫) ಅತಿ ಹಳೆಯದಾದ ಇಸಬು, ಗಜಕರ್ಣ, ಇಂದ್ರಲುಪ್ತ, ವೀಸರ್ಪ ಇತ್ಯಾದಿ ಅನೇಕ ಚರ್ಮ ರೋಗಗಳಿಗೆ ರಕ್ತಮೋಕ್ಷಣ ಮಾಡಲಾಗಿ ಸಂಪೂರ್ಣ ಗುಣವಾದ ಅನೇಕ ಉದಾಹರಣೆಗಳಿವೆ.

(೬) ಶ್ವಿತ್ರದ ಭಾಗಕ್ಕೆ ರಕ್ತಮೋಕ್ಷಣ ಮಾಡಲಾಗಿ ಸ್ಥಾನಿಕ ವೈವರ್ಣ್ಯವು ನಷ್ಟವಾದ ಉದಾಹರಣೆಗಳಿವೆ.

(೭) ಉಪದಂಶದ ಗಂಟುಗಳಿಗೆ, ಅಭಿಘಾತಜನ್ಯ ನಾಸಾಂತರ್ಗತ ಶೋಫಗಳಿಗೆ ಮತ್ತು ದುಷ್ಟ ವ್ರಣಗಳಿಗೆ ಜಲೂಕಾ ಹಚ್ಚಿ ರಕ್ತಸ್ರುತಿ ಮಾಡಲಾಗಿ ಗುಣ ಬಂದಿರುತ್ತದೆ.

(೮) ಅತಿ ಹಳೆಯದಾದ ಅರ್ಧಶಿರಃ ಶೂಲಿ, ನೇತ್ರದಲ್ಲಾಗತಕ್ಕ ಅರ್ಮ ರೋಗಗಳು, ಶಿರಃಶೂಲಿ, ಶಿರೋ ಭ್ರಮಣಾದಿಗಳು ರಕ್ತಮೋಕ್ಷಣದಿಂದ ಗುಣವಾಗಿರುತ್ತವೆ.

(೯) ಮಾಂಸಾರ್ಬುದ, ರಕ್ತಾರ್ಬುದ, ವಿದ್ರಧಿ ಹಾಗೂ ಇನ್ನೂ ಅನೇಕ ದೇಹದ ಬೇರೆ ಬೇರೆ ಭಾಗಗಳಲ್ಲಿ ಆಗತಕ್ಕ ಸಣ್ಣ ದೊಡ್ಡ ಗಂಟುಗಳು, ಜಿಗಳೆಯಿಂದ ರಕ್ತಮೋಕ್ಷಣ ಮಾಡಲಾಗಿ ಗುಣವಾದ ಬಹಳಷ್ಟು ಉದಾಹರಣೆಗಳಿವೆ.

(೧೦) ವಾತರಕ್ತ, ಅರ್ದಿತ, ಆಮವಾತ ಇತ್ಯಾದಿ ರೋಗಿಗಳಿಗೆ ಜಲೂಕಾ ವಿಧಿಯಿಂದ ರಕ್ತಮೋಕ್ಷಣ ಮಾಡಲಾಗಿ ಬಹಳಷ್ಟು ಉಪಶಯು ಕಂಡು ಬಂದಿದೆ.

ಇದೇ ರೀತಿಯಾಗಿ ಇನ್ನೂ ಎಷ್ಟೋ ಅನುಭೂತ ಉದಾಹರಣೆಗಳನ್ನು ಕೊಡಬಹುದು. ಆದರೆ ವಿಸ್ತಾರ ಭಯದಿಂದ ಇಷ್ಟಕ್ಕೇ ಮುಗಿಸುವೆವು.

ಆದಕಾರಣ ಒಳ್ಳೇ ಶಾಸ್ತ್ರಾಧ್ಯಯನ ಮಾಡಿಧ ಆಯುರ್ವೇದೀಯರು ತಮ್ಮ ಬುದ್ಧಿ ಚಾತುರ್ಯದಿಂದ ಇನ್ನೂ ಅನೇಕ ವಿಕಾರಗಳಲ್ಲಿ ಜಲೂಕಾ ವಿಧಿಯನ್ನು ಆಚರಿಸಿ ಯಶಸ್ಸನ್ನು ಪಡೆಯಲು ಖಂಡಿತವಾಗಿ ಸಾಧ್ಯವಿದೆ ಎಂದು ಅಭಿಪ್ರಾಯ ಪಡುತ್ತೇವೆ.

ಈ ರೀತಿಯಾಗಿ ಮಾನವನಿಗೆ ಉಪಕಾರಿಯಾದ ಜಿಗಳೆಗಳ ಪಾಲನ ಪೋಷಣಾದಿಗಳನ್ನು ಮಾಡಿ, ಅವುಗಳಿಂದಾಗುವ ಪ್ರಯೋಜನವನ್ನು ಹೊಂದಿ ಅವುಗಳ ವಿಷಯದಲ್ಲಿ ಪೂಜ್ಯ ಭಾವನೆಯನ್ನು ತಾಳಬೇಕು.

ಮೇಲೆ ಹೇಳಿದಂತೆ ಎಲ್ಲೆಲ್ಲಿ ಶಸ್ತ್ರ ಕರ್ಮ ಮಾಡುವದಗತ್ಯವೋ ಅಲ್ಲಲ್ಲಿ ಜಿಗಳೆಗಳು ಸಜೀವ ಶಸ್ತ್ರಚಾರಿಗಳೆಂದು ಹೇಳಬಹುದು.



ನುಭೂತ ಉದಾಹರಣೆಗಳನ್ನು
ರ ಇಷ್ಟಕ್ಕೇ ಮುಗಿಸುವೆವು.

ಾಡಿದ ಆಯುರ್ವೇದೀಯ ಶಸ್ತ್ರ
ಕ ವಿಕಾರಗಳಲ್ಲಿ ಜಲೂಕಾ
ಖಂಡಿತವಾಗಿ ಸಾಧ್ಯವಿದೆ

ಯಾದ ಜಿಗಳೆಗಳ ಪಾಲನ
ಾಗುವ ಪ್ರಯೋಜನವನ್ನು
ಯನ್ನು ತಾಳಬೇಕು.

ರ್ಯ ಮಾಡುವದಗತ್ಯವೋ
ಹೇಳಬಹುದು.




ಆಯುರ್ವೇದೀಯ

# ಯಂತ್ರಶಸ್ತ್ರ ಪರಿಚಯ

## ಪ್ರಥಮೋಧ್ಯಾಯವು [ಯಂತ್ರ ಪ್ರಕರಣವು]

### ಯಂತ್ರ ಲಕ್ಷಣ

ಮನಃ ಶರೀರಾಬಾಧಕರಾಣಿ ಶಲ್ಯಾನಿ। ತೇಷಾಮಾಹರಣೋಪಾಯೋ ಯಂತ್ರಾಣಿ ||೪|| (ಸು ಸೂ, ಅ.೭)

ಶಲ್ಯ ಎಂಬುವು ಮನಸ್ಸು ಮತ್ತು ಶರೀರಕ್ಕೆ ದುಃಖ (ಪೀಡಾ) ಕೊಡುವವು. ಅವುಗಳ ಆಹರಣ ಮಾಡುವ ಉಪಾಯಗಳ ಹೆಸರು "ಯಂತ್ರ" ವೆಂದು ಇರುತ್ತದೆ.

ವಕ್ತವ್ಯ:— "ಶಲ್ಯ" ಶಬ್ದವು ಶಲ್ (ತೀವ್ರಗತೌ) ಧಾತುವಿನಿಂದ ಆಗಿದೆ. (" ಶಲ್ " "ಶ್ವಲ್" ಆಶುಗಮನೆ ಧಾತುಃ; ತಸ್ಯ ಶಲ್ಯಮಿತಿ ರೂಪಮ್ ||೩|| (ಸು. ಸೂ. ಅ. ೨೬)— 'ಶಲತೀತಿ ಶಲ್ಯಂ' ಈ ನಿರ್ವ

---

(೧) ಸುಶ್ರುತದಕಿಂತಲೂ ವಾಗ್ಭಟದಲ್ಲಿ ಯಂತ್ರದ ನಿರ್ವಚನೆಯು ಸ್ಪಷ್ಟ ಮಾಡಿದೆ. ಹೇಗೆಂದರೆ— ನಾನಾ ವಿಧಾನಾಂ ಶಲ್ಯಾನಾಂ ನಾನಾ ದೇಶ ನಿವೇಶಿನಾಂ। ಆಹೃತಾವಾಭ್ಯುಪಾಯೋ ಯಸ್ತದ್ ಯಂತ್ರಂ ಯಚ್ಚ ದರ್ಶನೆ ||೨|| ಅರ್ಶೋಭಗಂದರಾದೀನಾಂ ಶಸ್ತ್ರಕ್ಷಾರಾಗ್ನಿ ಯೋಜನೇ। ಶೇಷಾಂಗ ಪರಿರಕ್ಷಾಯಾಂ ತಥಾಬಸ್ತ್ಯಾದಿ ಕರ್ಮಣಿ। ಘಟಿಕಾಲಾಬು ಶೃಂಗಂಚ ಜಾಂಬವೋಷ್ಠಾದಿಕಾನಿಚ ||೩|| (ಅ. ಹೃ. ಸೂ. ಅ. ೨೫)

ಚನದ ಅನುಸಾರವಾಗಿ ತೀವ್ರಗತಿಯಿಂದ ಶರೀರದಲ್ಲಿ ಬಾಣ, ಗುಂ ಮುಳ್ಳು. ಮೊದಲಾದವುಗಳ ಪ್ರವೇಶವಾಗುವದೇ 'ಶಲ್ಯ' ಶಬ್ದ ಬೋ ವಿರುತ್ತದೆ. ಆಂಗ್ಲಭಾಷೆಯಲ್ಲಿ ಶಲ್ಯಕ್ಕೆ (ಬಾಹ್ಯವಸ್ತು) ಎನ್ನುತ್ತಾರೆ. ಇ ಬಾವು, ಶೂಲಾದಿಗಳನ್ನುತ್ಪನ್ನ ಮಾಡಿ ಕೇವಲ ದುಃಖ ಕೊಡುವದನ್ನ ಅಲ್ಲದೆ ಪ್ರತ್ಯುತ ಪ್ರಾಣಹಾನಿ ಅಥವಾ ಜೀವನ ನಾಶಕ್ಕೂ ಕಾರಣೀಭೂ ವಾಗುತ್ತವೆ. ಆದ್ದರಿಂದ ಅವುಗಳನ್ನು ತೀವ್ರ ತೆಗೆಯುವುದು ಅನಿವಾ ವೆಂದು ತಿಳಿದು ಪ್ರಾಚೀನ ಮಹರ್ಷಿಗಳು ಯಂತ್ರಗಳನ್ನು ರಚಿಸಿದರು "ಯಮ್ಯತೆ ನಿಯಮ್ಯತೆ (ಅನೇನ) ಇತಿ ಯಂತ್ರಮ್" (ಅರುಣದತ್ತ ಅರ್ಥಾತ್ ಯಾವದರಿಂದ ಶಲ್ಯಗಳು ಯಂತ್ರಿತ ಅಥವಾ ನಿಯಂತ್ರಿತ (ವಶ ವಾಗಿ ಹೊರಗೆ ತೆಗೆಯಲ್ಪಡುತ್ತವೆಯೋ ಅದಕ್ಕೆ ಯಂತ್ರ ಎನ್ನುತ್ತಾರೆ.

ಯಂತ್ರಗಳು ಪುನಃ ಎರಡು ಪ್ರಕಾರದವಿರುತ್ತವೆ (೧) ಸ್ಥೂಲಮುಖಿ. ಇವುಗಳಿಗೆ ನಮ್ಮ ಆಚಾರ್ಯರು ಯಂತ್ರವೆಂದು ಸಂಜ್ಞೆಯನ್ನು ಕೊಟ್ಟಿದ್ದಾರೆ. ಇವು ಕೇವಲ ಯಂತ್ರಣ ಮಾಡುತ್ತವೆ. (ವಶಪಡಿಸಿಕೊಳ್ಳುತ್ತವೆ) ಉದಾ:– ಇಕ್ಕಳ, ಚಿಮಟಿಗೆ ಮೊದಲಾದವು. (೨) ಸೂಕ್ಷ್ಮಮುಖೀ ಅಥವಾ ತೀಕ್ಷ್ಣ ಧಾರ. ಇವು ಛೇದನ, ಭೇದನ, ಪಾಟನ (ಹರಿಯುವದು, ಕೊರೆಯುವದು) ಮೊದಲಾದ ಕ್ರಿಯೆಗಳನ್ನು ಮಾಡುತ್ತವೆ. ಉದಾ:— ಚಾಕೂ, ಕರಗಸ, ಕತ್ತರಿ ಮೊದಲಾದವು. ಇವುಗಳಿಗೆ ಶಲ್ಯ ಶಾಸ್ತ್ರದಲ್ಲಿ ಶಸ್ತ್ರ (ಕತ್ತರಿಸುವದು) ಎಂದು ಸಂಜ್ಞೆಯು ಕೊಡಲ್ಪಟ್ಟಿದೆ. ಈ ಅಧ್ಯಾಯದಲ್ಲಿ ಕೇವಲ ಯಂತ್ರಗಳ ವರ್ಣನೆಯು ಹೇಳಲ್ಪಡುವದು.

---

ಅರ್ಥಾತ್ ಯಾವದು ಶರೀರದ ಎರಡು ಪ್ರಕಾರದ ಭಿನ್ನ ಭಾಗಗಳಲ್ಲಿ ಪ್ರವಿಷ್ಟವಾದ ನಾನಾಪ್ರಕಾರದ ಶಲ್ಯಗಳನ್ನು ಅಪಹರಿಸುತ್ತದೋ, ರೋಗ ಪರೀಕ್ಷಾರ್ಥವಾಗಿಯೂ ಮತ್ತು ಅರ್ಶ ಭಗಂದರಾದಿಗಳಲ್ಲಿ ಶಸ್ತ್ರ. ಕ್ಷಾರ, ಅಗ್ನಿ ಪ್ರಯೋಗದ ಸಲುವಾಗಿಯೂ, ಉಳಿದ ಶರೀರದ ರಕ್ಷಣೆಯ ಸಲುವಾಗಿಯೂ, ಮತ್ತು ಬಸ್ತಿ ಮೊದಲಾದವುಗಳ ಕಾರಗಳಲ್ಲಿಯೂ ವ್ಯವಹರಿಸಲ್ಪಡುವವೋ ಅವುಗಳಿಗೆ "ಯಂತ್ರ" ಗವೆನ್ನುತ್ತಾರೆ. ಘಟಿಕಾ, ಅಲಾಬು, ಶೃಂಗ, ಜಾಂಬವೋಷ್ಠಾದಿಗಳೂಸಹ ಯಂತ್ರಾಂತತವೆಂದು ತಿಳಿಯತಕ್ಕದ್ದು. ಇವುಗಳ ವ್ಯಾಖ್ಯೆಯು ಅಲ್ಲಲ್ಲಿ ಮುಂದೆಮಾಡಲ್ಪಡುವದು.

## ಯಂತ್ರ ಸಂಖ್ಯಾ ೨

ಯಂತ್ರಶತಮೇಕೋತ್ತರಂ; ಅತ್ರಹಸ್ತಮೇವ ಪ್ರಧಾನತಮಂ
ಯಂತ್ರಾಣಾಮವಗಚ್ಛ, (ಕಿಂಕಾರಣಂ? ಯಸ್ಮಾದ್ಧಸ್ತಾದೃತೇ
ಯಂತ್ರಣಾಮಪ್ರವೃತ್ತಿರೇವ) ತದಧೀನತ್ವಾದ್ಯಂತ್ರ
ಕರ್ಮಣಾಮ್ ‖೩‖ (ಸು. ಸೂ. ಅ. ೭)

ಯಂತ್ರಗಳು ೧೦೧ ಇವೆ.* ಅವುಗಳಲ್ಲಿ ಹಸ್ತವು ಪ್ರಧಾನತಮ ಮುಖ್ಯ— Chief) ಇರುತ್ತದೆ. ಏಕೆ ಎಂದರೆ ಹಸ್ತದ ಹೊರತಾಗಿ ಯಂತ್ರಗಳ ಸಂಚಲನೆಯು ನಡೆಯಲಾರದು. ಯಂತ್ರಗಳ ಕಾರ್ಯವು ಪ್ರಯೋಗವು) ಹಸ್ತದ ಅಧೀನವೇ ಇರುತ್ತದೆ.

ವಕ್ತವ್ಯ— ಇಲ್ಲಿ 'ಶತ' ಎಂಬ ಶಬ್ದಕ್ಕೆ ೧೦೦ ಸಂಖ್ಯೆ ಎಂದು ಅರ್ಥ ಮಾಡಲಾಗದು. ಆದರೆ ಅದನ್ನು 'ಅನಂತ' ವಾಚಕವೆಂದು ತಿಳಿಯ ತಕ್ಕದ್ದು. ಯಂತ್ರಗಳನಿಯಮಿತ ಸಂಖ್ಯೆಯು ಇರಲಾರದು. ಅವಶ್ಯಕತೆ ಯನ್ನನುಸರಿಸಿ ಅವುಗಳನ್ನು ಕಡಿಮೆ ಮಾಡುವದು ಮತ್ತು ಹೆಚ್ಚು ಮಾಡು ವದು ಶಕ್ಯವಿದೆ. ಅದು ಶಲ್ಯಕರ್ಮಜ್ಞರ ಅನುಭವದ ಮೇಲೆ ನಿರ್ಭರವಿದೆ. ಯಂತ್ರಗಳಲ್ಲಿ ಪ್ರಧಾನತೆಯನ್ನು ಮಾನವನ ಹಸ್ತಗಳಿಗೆ ಕೊಟ್ಟಿರುತ್ತದೆ. ಆದರೆ ಇಲ್ಲಿ ಹಸ್ತದ ಅಭಿಪ್ರಾಯವು ಸಿದ್ಧಹಸ್ತವೆಂದು ತಿಳಿಯತಕ್ಕದ್ದು. ಶಲ್ಯಕರ್ಮದಲ್ಲಿ ಪ್ರವೀಣ ವೈದ್ಯ (ಧನ್ವಂತರಿ) ರಂತೆ ಹಸ್ತವುಳ್ಳವರೆಂಬ ಅಭಿಪ್ರಾಯವು. (೧)

ಯಂತ್ರ ಅಥವಾ ಶಸ್ತ್ರಗಳನ್ನು ಸುಂದರ ರೀತಿಯಿಂದ ಶಲ್ಯಕರ್ಮಜ್ಞ ನಾದ ದಕ್ಷ ಪ್ರಜಾಪತಿಯೇ ಉಪಯೋಗಿಸಲು ಸಮರ್ಥನೇ ಹೊರತು ಅಜ್ಞರಾದ ಮಾನವರಲ್ಲ.

---

* ಈ ವಿಷಯವಲ್ಲಿ ವಾಗ್ಭಟದ ವಚನವನ್ನು ನೋಡಿರಿ — "ಅನೇಕ ರೂಪಕಾರ್ಯಾಣಿ ಯಂತ್ರಾಣಿ ವಿವಿಧಾನ್ಯತಃ। ವಿಕಲ್ಪ್ಯ ಕಲ್ಪಯೇದ್ ಬುದ್ಧ್ಯಾಯಥಾ ಸ್ಥೂಲಂತು ವಕ್ಷ್ಯತೆ ‖೪‖ (ಅ. ಹೃ. ಸೂ. ಅ. ೨೫) ಯಂತ್ರಗಳು ಅನೇಕ ಆಕೃತಿಯುಳ್ಳವೂ ಮತ್ತು ಕಾರ್ಯಗಳ ಕಾರಣದಿಂದ ವಿವಿಧ ಪ್ರಕಾರದವೂ ಆಗುತ್ತವೆ. ಆದ್ದರಿಂದ ಶಸ್ತ್ರಕರ್ಮಜ್ಞರಾದ ವೈದ್ಯರ ಅವುಗಳನ್ನು (ಆವಶ್ಯಕತಾನುಸಾರವಾಗಿ) ವಿವಿಧ ರೂಪದಿಂದ ಕಲ್ಪಿಸಿ ಬುದ್ಧಿ

ತಾನಿ ಷಟ್ ಪ್ರಕಾರಾಣಿ; ತದ್ಯಥಾ-ಸ್ವಸ್ತಿಕ ಯಂತ್ರಾಣಿ, ಸಂದಂ ಯಂತ್ರಾಣಿ, ತಾಲಯಂತ್ರಾಣಿ, ನಾಡೀಯಂತ್ರಾಣಿ, ಶಲಾಕಾಯಂತ್ರಾ ಉಪಯಂತ್ರಾಣಿಚೇತಿ ||೫|| (ಸು. ಸೂ. ಅ. ೭)

ಅವು ಆರು ಪ್ರಕಾರದವು ಇರುತ್ತವೆ. ಹೇಗೆಂದರೆ— (೧) ಸ್ವಸ್ತಿ ಯಂತ್ರ (೨) ಸಂದಂಶಯಂತ್ರ (೩) ತಾಲಯಂತ್ರ (೪) ನಾಡೀಯಂತ್ರ (೫) ಶಲಾಕಾಯಂತ್ರ ಮತ್ತು (೬) ಉಪಯಂತ್ರ.

ಟಿಪ್ಪಣಿ — ಇದು ಯಂತ್ರಗಳ ಸ್ಥೂಲ ವಿಭಾಗವೆಂದು ತಿಳಿಯ ತಕ್ಕದ್ದು. ಪ್ರತ್ಯೇಕ ಪ್ರಕಾರದಲ್ಲಿ ಸಣವು ದೊಡ್ಡವು ಅಥವಾ ಅನ್ಯ ಬೇರೆ ಬೇರೆ ಭೇದಗಳಿಂದ ಅನೇಕ ಯಂತ್ರಗಳಾಗುತ್ತವೆ. ಹೇಗೆಂದರೆ ಹಿಂದಿನ ಪುಟಗಳ ಅಭ್ಯಾಸದಿಂದ ತಿಳಿದಿರುವದು.

ತತ್ರಚತುರ್ವಿಂಶತಿಃ ಸ್ವಸ್ತಿಕಯಂತ್ರಾಣಿ, ದ್ವೆ ಸಂದಂಶಯಂತ್ರೆ ದ್ವೆ ಏವತಾಲ ಯಂತ್ರೆ, ವಿಂಶತಿರ್ನಾಡ್ಯಃ, ಅಷ್ಟಾವಿಂಶತಿಶ್ಯಲಾಕಾಃ, ಪಂಚ ವಿಂಶತಿರುಪ ಯಂತ್ರಾಣಿ ||೬|| (ಸು. ಸೂ. ಅ. ೭)

ಅವುಗಳ ಸಂಖ್ಯೆಯು ಈ ಪ್ರಕಾರವಿದೆ:— (೧) ಸ್ವಸ್ತಿಕಯಂತ್ರಗಳು ೨೪; (೨) ಸಂದಂಶಯಂತ್ರಗಳು ೨; (೩) ತಾಲಯಂತ್ರಗಳು (೪) ನಾಡೀಯಂತ್ರಗಳು೨೦ (೫) ಶಲಾಕಾಯಂತ್ರಗಳು ೨೮, ಮತ್ತು (೬) ಉಪ ಯಂತ್ರಗಳು ೨೫

ವಕ್ತವ್ಯ— ಈ ಪ್ರಕಾರವಾಗಿ ಯಂತ್ರಗಳ ಸಮಸ್ತಸಂಖ್ಯೆಯು ೧೦೧ ಆಗುತ್ತದೆ. ಆದರೆ ಆವಶ್ಯಕತೆಯಂತೆ ಇವು ನ್ಯೂನಾಧಿಕ (ಹೆಚ್ಚುಕಡಿಮೆ) ಆಗಬಲ್ಲವು. ಸ್ವಸ್ತಿಕಯಂತ್ರಾದಿಗಳ ವ್ಯಾಖ್ಯೆಯನ್ನು ಮುಂದೆ ನೋಡಿರಿ.

---

ಪೂರ್ವಕವಾಗಿ ಮಾಡಿದ್ದಾರೆ. ಈಗ ಸ್ಥೂಲರೂಪವಾಗಿ ಅವುಗಳ ವರ್ಣನೆ ಯನ್ನು ಮಾಡುವಾ!" ಈ ಪ್ರಕಾರವಾಗಿ ಶ್ರೀ ವಾಗ್ಭಟನು ೧೦೧ ಯಂತ್ರ ಸಂಖ್ಯೆಯನ್ನು ನಿರ್ದೇಶ ಮಾಡಿರುವದಿಲ್ಲ. ಆದರೆ ಯಾವ ಯಾವ ಯಂತ್ರ ಗಳನ್ನು ಸುಶ್ರುತಕಾರರು ಮಾಡಿದ್ದಾರೋ ಅದಕ್ಕೂ ಎಷ್ಟೋ ಹೆಚ್ಚು ಯಂತ್ರಗಳನ್ನು ವಾಗ್ಭಟಕಾರರು ಬರೆದಿದ್ದಾರೆ. ಹೇಗೆಂದರೆ- ಮುಚುಂಡೀ, ಯೋನಿವ್ರಣೇಕ್ಷಣ ಯಂತ್ರ, ಗರ್ಭಶಂಕು, ಇತ್ಯಾದಿ ಇತ್ತೀಚಿನ ಯಾವದೇ ದೊಡ್ಡ ಋಗ್ಣಾಲಯದ ಶಲ್ಯ ವಿಭಾಗದಲ್ಲಿ ಹೋಗಿ ನೋಡಿರಿ. ಅಲ್ಲಿ ಎಷ್ಟು ಯಂತ್ರಶಸ್ತ್ರಗಳಿರುತ್ತವೆ? ಶರೀರದಲ್ಲಿ ವಿಶೇಷವಾಗಿ ಅಂಗ

ತಾನಿಪ್ರಾಯಶೋ ಲೌಹಾನಿಭವಂತಿ, ತತ್ಪ್ರತಿರೂಪಕಾಣಿ ತದಲಾಭೆ ||೭|| (ಸು. ಸೂ. ಅ. ೭)

ಯಂತ್ರಗಳು ಪ್ರಾಯಃ ಲೋಹಾದಿ ಧಾತುಗಳಿಂದ ಆಗುತ್ತವೆ. ಒಂದು ವೇಳೆ ಧಾತುಗಳು ಸಿಗದಿದ್ದಲ್ಲಿ ಅದರ ಸಮಾನವಾದ ಪದಾರ್ಥಗಳಿಂದ (ಕಾಷ್ಠ, ಬಿದಿರು, ಕೋಡು, ಆನೆಕೋರೆ ಮೊದಲಾದ ಬಿರುಸು ಪದಾರ್ಥಗಳಿಂದ) ಸಹಿತ ಮಾಡಲು ಶಕ್ಯವಿದೆ.

ವಕ್ತವ್ಯ:— ಇಲ್ಲಿ 'ಲೌಹ' ಶಬ್ದವು ಕೇವಲ ಕಬ್ಬಿಣ (Iron) ದ ಅರ್ಥದಲ್ಲಿ ಇಲ್ಲ. ಆದರೆ ಬಂಗಾರ, ಬೆಳ್ಳಿ, ತಾಮ್ರಾದಿ ಸಪ್ತ ಧಾತು ವಾಚಕವಿದೆ. ಆದಾಗ್ಯೂ ಕಬ್ಬಿಣದ ಪ್ರಧಾನತೆಯನ್ನು ತಿಳಿಯತಕ್ಕದ್ದು. ಕಬ್ಬಿಣದಲ್ಲಿ ಎಷ್ಟೋ ಪ್ರಕಾರಗಳಾಗುತ್ತವೆ. ಅವುಗಳಲ್ಲಿ ಯಂತ್ರ ಅಥವಾ ಶಸ್ತ್ರಗಳ ನಿರ್ಮಾಣ ಕಾರ್ಯದಲ್ಲಿ ಬಹುತರವಾಗಿ ಶಸ್ತ್ರಲೋಹ = ಉಕ್ಕು (Steel) ಸಹಿತವಾಗಿ ಇರುತ್ತದೆ.

---

(ನೇತ್ರ, ಕರ್ಣ, ನಾಸಾ, ಮುಖ, ಮೂತ್ರಾಶಯಾದಿ) ಗಳ ದೆಶೆಯಿಂದ ಬೇರೆ ಬೇರೆ ಪ್ರಕಾರದಲ್ಲಿ ಅನೇಕ ಯಂತ್ರಗಳಿರುತ್ತವೆ.

(ಮೂರನೇ ಪುಟದ ಟೀಪು ಗುರ್ತು) ೧. ಇತ್ತೀಚಿನ ಚಿಕಿತ್ಸಕರಲ್ಲಿ ಬಹುತರವಾಗಿ ಎರಡು ಸಂಪ್ರದಾಯಗಳು ಇರುತ್ತವೆ. Physician ಎಂಬ ಶಬ್ದಕ್ಕೆ ವೈದ್ಯ, ಚಿಕಿತ್ಸಕ ಇತ್ಯಾದಿ ಶಬ್ದಗಳು ಚನ್ನಾಗಿವೆ. ಆದರೆ Surgeon ಎಂಬ ಶಬ್ದಕ್ಕೆ ಏನನ್ನಬೇಕು? ನನ್ನ ವಿಚಾರದಲ್ಲಿ 'ಧನ್ವಂತರಿ, ಎಂಬ ಶಬ್ದವೇ ಸಮೀಚೀನವಾಗಿದೆ-- ಇದರ ಅರ್ಥವನ್ನು ಡಲ್ಹಣನು ಹೀಗೆ ಮಾಡಿದ್ದಾನೆ. " ಧನ್ವಂ = ಶಲ್ಯ ಶಾಸ್ತ್ರಂ, ತಸ್ಯಾಂತಂ= ಪಾರಂ, ಇಯರ್ತಿ= ಗಚ್ಛತಿ, ಇತಿ ಧನ್ವಂತರಿಃ" (ಡಲ್ಹಣ). ;ಧನ್ವದ ಅರ್ಥವು ಶಲ್ಯ ಶಾಸ್ತ್ರವೆಂದಿದೆ. ಯಾರು ಶಲ್ಯ ಶಾಸ್ತ್ರದಲ್ಲಿ ಪ್ರವೀಣರಿದ್ದಾರೋ ಅವರಿಗೆ ಧನ್ವಂತರಿ (Surgeon) ಎನ್ನುತ್ತಾರೆ. ಅರ್ಥಾತ್ "ಶಲ್ಯಶಾಸ್ತ್ರಪಾರಗ:" ಈ ವಿಷಯದಲ್ಲಿ ನಮಗೆ ಚರಕಾಚಾರ್ಯರ ಪ್ರಮಾಣವೂ ಸಿಗುತ್ತದೆ. " ಅತಃ ಪರಂಚಕರ್ಮ ಧಾನ್ವಂತರೀಯಾಣಾಮ್" (ಚ. ಚಿ. ಅ.) ಅರ್ಥಾತ್ ಇವರ ಮೇಲೆ ಧನ್ವಂತರಿ ವೈದ್ಯರ ಅಧಿಕಾರವಿರುತ್ತದೆ. ಆದರೆ ಚಿಕಿತ್ಸಕರ ದಲ್ಲ. ಕಾಯ ಚಿಕಿತ್ಸಕ ಮತ್ತು ಶಲ್ಯ ಚಿಕಿತ್ಸಕ ಎಂದು ಸಹ ವೈದ್ಯರು ಬಹು

ಯಂತ್ರಶಸ್ತ್ರ ವಿಷಯದಲ್ಲಿ ಲೋಹಧಾತುವು ಎಷ್ಟು ಉಪಯುಕ್ತ ವಿರುತ್ತದೋ ಅಷ್ಟು ಉಪಯೋಗಕರವು ಅನ್ಯ ಯಾವ ಧಾತುವೂ ಇರು ದಿಲ್ಲ. (§) ಇವರ ಕಾರಣವೇನಂದರೆ ಲೋಹದ ಗಟ್ಟಿತನ, ಕಠೋರತ ಮತ್ತು ತೀಕ್ಷ್ಣತೆಯುಳ್ಳ ತುದಿ. ಅನ್ಯಧಾತುಗಳಲ್ಲಿ ಮೃದುತ್ವ (ಉದಾ:— ಬಂಗಾರ) ಮತ್ತು ಭಂಗುರತ್ವ ಅಂದರೆ ಒಡೆಯುವಿಕೆ (ಉದಾ : ಸತುವು ಮೊದಲಾದ ದೋಷಗಳು ಕಂಡು ಬರುತ್ತವೆ. ನೀರು, ಗಾಳಿಗಳ ಪ್ರಭಾವ ದಿಂದಲೂ ಅವು ತೀವ್ರ ದೂಷಿತವಾಗಿ ಹೋಗುತ್ತವೆ. (ಉದಾ : ತಾಮ್ರ ಮತ್ತು ಬೆಳ್ಳಿ) ಲೋಹಮಯ ಯಂತ್ರಗಳಿಗೆ ನೀರು ಮತ್ತು ಗಾಳಿಗಳ ಪ್ರಭಾವದಿಂದ ಉಳಿಸಲು ಇತ್ತೀಚಿಗೆ ನಿಕ್ಕಲ ಧಾತುವಿನ ಆವರಣವನ್ನು ಕೊಡುತ್ತಾರೆ. ಯಂತ್ರ ನಿರ್ಮಾಣದಲ್ಲಿ ಲೋಹದ ಹೊರತಾಗಿ ಅನ್ಯ ಧಾತು, ಹಸ್ತಿದಂತ, ಕಾಷ್ಠ, ಬಿದಿರು, ಕೋಡು, ಕಾಜು, ಅಸ್ಥಿ, ರಬ್ಬರ ಮೊದಲಾದವುಗಳ ಉಪಯೋಗವೂ ಆಗುತ್ತದೆ.

ತತ್ರ ನಾನಾಪ್ರಕಾರಾಣಾಂ ವ್ಯಾಲಾನಾಂ ಮೃಗಪಕ್ಷಿಣಾಂ ಮುಖೈ ರ್ಮುಖಾನಿ ಯಂತ್ರಾಣಾಂ ಪ್ರಾಯಶಃ ಸದೃಶಾನಿ; ತಸ್ಮಾತ್ ತತ್ಸಾ ರೂಪ್ಯಾದಾಗಮಾದುಪದೇಶಾದನ್ಯ ಯಂತ್ರದರ್ಶನಾದ್ಯುಕ್ತಿತಶ್ಚ ಕಾರ ಯೇತ್ ॥೮॥

(ಸು. ಸೂ. ಅ. ೭)

ತರವಾಗಿ ವಿಭಾಗ ಮಾಡುತ್ತಾರೆ. ಅಷ್ಟಾಂಗ ಹೃದಯ ದಲ್ಲಿ ಯಂತ್ರಗಳ ಪ್ರಕಾರ ಅಥವಾ ಸಂಖ್ಯಾನಿರ್ದಿಷ್ಟ ವಾಚಕವಾದ ಯಾವ ವಚನವೂ ಸಿಗು ವದಿಲ್ಲ. ಆದಾಗ್ಯೂ ಅದರಲ್ಲಿ ಸುಶ್ರುತದ ಅನುಸಾರವಾಗಿ ಸ್ವಸ್ತಿಕಾದಿ ಯಂತ್ರಗಳ ವರ್ಣನೆಯು ಅನುಕ್ರಮವಾಗಿ ಸಿಗುತ್ತದೆ. ಅದರಿಂದಲೇ ಗಣನೆ ಶಕ್ಯವಿದೆ.

(§) ಈ ವಿಷಯದಲ್ಲಿ ವಾಗ್ಭಟದ ಸಂಕ್ಷಿಪ್ತ ಮತ್ತು ಸ್ಪಷ್ಟೋಕ್ತಿ ಗಳನ್ನು ನೆನಪಿನಲ್ಲಿಡಿರಿ— "ಆಯಸಾನಿಚ ಭೂರಿಶಃ" (ಅ. ಹೃ. ಅ. ೨೫ ಶ್ಲೋ. ೬) ಅರ್ಥಾತ್ ಯಂತ್ರಗಳು ಬಹುಶಃ (ಅಧಿಕತರ) ಕಬ್ಬಿಣ (ಉಕ್ಕು) ದವೇ ಆಗತಕ್ಕದ್ದು. ಅರುಣದತ್ತನು 'ಆಯಸ' ದ ಅರ್ಥವನ್ನು "ಶಸ್ತ್ರಮಯ" ಅರ್ಥಾತ್ ಶಸ್ತ್ರಲೋಹ (ಉಕ್ಕು) ಯುಕ್ತವೆಂದು ಹೇಳಿ ಮತ್ತಷ್ಟು ಸ್ಪಷ್ಟೀಕರಿಸಿದ್ದಾನೆ.

ಯಂತ್ರಗಳ ಮುಖವು (ಅಗ್ರಭಾಗವು) ಬಹುಶಃ ವ್ಯಾಲ (ಹಿಂಸ್ರ) ಮೃಗ (ಸಿಂಹ, ಹುಲಿ ಇತ್ಯಾದಿ ಕಾಡುಪಶು) ಗಳ ಮತ್ತು ಪಕ್ಷಿ (ಕಾಗೆ, ಡುಗ, ಶುಕ ಇತ್ಯಾದಿ) ಗಳ ಮುಖ (ಚುಂಚು) ಗಳ ಸದೃಶವಾಗಿ ಇರುತ್ತವೆ. ಆದುದರಿಂದ ಯಂತ್ರಗಳ ನಿರ್ಮಾಣವನ್ನು ಪಶುಪಕ್ಷಿಗಳ ಸದೃಶ, ಆಗಮ (ಶಾಸ್ತ್ರ) ದ ಅನುಸಾರ, (ವೃದ್ಧ ವೈದ್ಯರ) ಉಪದೇಶದಿಂದ, ಅನ್ಯ ಯಂತ್ರಗಳನ್ನು ನೋಡಿ ಮತ್ತು ಯುಕ್ತಿ (ಸ್ತ್ರೀ, ಪುರುಷ, ಬಾಲ, ವೃದ್ಧರ ವಿಚಾರ) ಯಿಂದ ಮಾಡತಕ್ಕದ್ದು.

ವಕ್ತವ್ಯ:— ಹಿಂಸಕ ಪಶುಪಕ್ಷಿಗಳ ಮುಖದ ಸಮಾನವಾಗಿ ಯಂತ್ರ ನಿರ್ಮಾಣದ ಉಪದೇಶವನ್ನು ಪ್ರಾಚೀನ ಮಹರ್ಷಿಗಳು ಈ ಕಾರಣದಿಂದ ಮಾಡಿದ್ದಾರೆ. ಯಾವ ಪ್ರಕಾರ ಪಶು, ಪಕ್ಷಿ, ಮಕರ (ಮೊಸಳೆ) ಸರ್ಪಾದಿಗಳು ಬೇಟೆಯನ್ನು ತನ್ನ ದವಡೆ (Jaws) ಯಿಂದ ಗಟ್ಟಿಯಾಗಿ ಹಿಡಿದುಕೊಳ್ಳುತ್ತವೆಯೋ ಇವೇ ರೀತಿಯಾಗಿ ಸಿಂಹಮುಖ, ವ್ಯಾಘ್ರಮುಖ, ಕಂಕಮುಖ, ಕಾಕಮುಖಾದಿ ಯಂತ್ರಗಳೂ ಸಹ "ಶಲ್ಯ" ವನ್ನು ಗಟ್ಟಿಯಾಗಿ ಹಿಡಿದುಕೊಂಡು ಹೊರಗೆ ತೆಗೆಯುವವು. ಪಶು, ಪಕ್ಷಿ, ವ್ಯಾಲಮುಖಗಳ ಸಾದೃಶ್ಯದ ಭಾವವು ಇಲ್ಲಿ ಅವುಗಳ ಕಣ್ಣು, ಮೂಗು ಅಥವಾ ಕಿವಿ ಮೊದಲಾದವುಗಳಿಂದ ಇರದೆ ಅದು ಅವುಗಳ ಬೇಟೆಯನ್ನು ಸ್ವಾಧೀನ ಮಾಡಿಕೊಳ್ಳುವದೋ ಅಂಥ ಹಲ್ಲು, ಕೋರೆಗಲ್ಲು, ಗದ್ದ ಮತ್ತು ದವಡೆಗಳ ಸಾದೃಶ್ಯವನ್ನು ಅವಲಂಬಿಸಿರುತ್ತದೆ. ಆದುದರಿಂದ ಯಂತ್ರಗಳ ಮುಖವು ಬಿರುಸಾದುದೂ ಹಲ್ಲು ಮುಂತಾದವುಗಳಿಂದ ಮುಕ್ತವಾದುದೂ ಆಗಿರತಕ್ಕದ್ದು. ಇದಕ್ಕೋಸ್ಕರ ನೀವು ಸಿಂಹಮುಖ ಯಂತ್ರದ ಚಿತ್ರವನ್ನು ನೋಡಿರಿ.

### ಯಂತ್ರ ನಿರ್ಮಾಣ ವಿಧಿಯು

ಸಮಾಹಿತಾನಿ ಯಂತ್ರಾಣಿ ಖರ ಶ್ಲಕ್ಷ್ಣಮುಖಾನಿಚ ।
ಸುದೃಢಾನಿ ಸುರೂಪಾಣಿ ಸುಗ್ರಹಾಣಿಚ ಕಾರಯೇತ್ ॥೯॥
(ಸು. ಸೂ. ಅ. ೭)

ಯಂತ್ರಗಳು ಸುಸಮಾಹಿತ (ಸರಿಯಾದ ಅಳತೆ- Size- ಉದ್ದ- ಅಗಲ ಉಳ್ಳವು) ಅಂತರ್ಭಾಗದಿಂದ (ಸಹಜಗುಣದಿಂದ) ಬಿರುಸಾದವೂ

(ತೀಕ್ಷ್ಣ- ಹುರಬರಕು) ಹೊರಗಿನಿಂದ ನುಣುಪಾದವೂ (ಮಸೃಣ, ಮೃದು ಮುಖವುಳ್ಳ ಸುದೃಢವಾದ ( ಗಟ್ಟಿಯಾದ—Strong ) ಸುರೂಪಾ (ಉತ್ತಮ ಆಕಾರವುಳ್ಳವು- ಆಕರ್ಷಕವಾದವು) ಮತ್ತು ಸುಗ್ರಹ (ಉತ್ತಮ ಗ್ರಹಸ್ಥಾನವುಳ್ಳ ಗಟ್ಟಿಯಾಗಿ ಹಿಡಿದುಕೊಳ್ಳಲಿಕ್ಕೆ! ಉತ್ತಮ ಹಿಡಿಕೆಯುಳ್ಳ ಮುಷ್ಟಿ Handle ಯುಕ್ತ ಹಿಡಿದುಕೊಳ್ಳಲು) ಗಳನ್ನಾಗಿ ಮಾಡ ತಕ್ಕದ್ದು †

ವಕ್ತವ್ಯ- ಯಂತ್ರಗಳ ಗುಣಗಳನ್ನು ಸುಶ್ರುತಾಚಾರ್ಯರು ಅತ್ಯಂತ ಸುಂದರ ಶಬ್ದಗಳಲ್ಲಿ ವರ್ಣಿಸಿದ್ದಾರೆ. ಯಂತ್ರ ನಿರ್ಮಾಣ ಕಾರ್ಯವು ದಕ್ಷ ಮತ್ತು ಅನುಭವೀ ಕರ್ಮಾರ (ಕಬ್ಬಿಣ ಕೆಲಸಮಾಡುವವರಲ್ಲಿ ನುರಿ ತವ) ರಿಂದ ಸುಜ್ಞರಾದ ವೈದ್ಯರ (ಧನ್ವಂತರಿಗಳ) ನಿರೀಕ್ಷಣೆಯಲ್ಲಿ ಮಾಡ ತಕ್ಕದ್ದು. ಪಾಶ್ಚಿಮಾತ್ಯ ದೇಶಗಳಲ್ಲಿ ಶಲ್ಯ ಸಂಬಂಧಿಯ ಯಂತ್ರ ಅಥವಾ ಶಸ್ತ್ರಗಳ ನಿರ್ಮಾಣಾರ್ಥವಾಗಿ ದೊಡ್ಡ ದೊಡ್ಡ ಕಾರ್ಯಾಲಯಗಳು ಇರು ತ್ತವೆ. ಪರಂತು ಭಾರತದಲ್ಲಿ ಈವರೆಗೆ ಈ ಕಾರ್ಯವು ಉಚಿತ ರೀತಿಯಿಂದ ಪ್ರಾರಂಭವಾಗಿರುವದಿಲ್ಲ.

### ಸ್ವಸ್ತಿಕ ಯಂತ್ರಗಳು

ತತ್ರ ಸ್ವಸ್ತಿಕಯಂತ್ರಾಣಿ ಅಷ್ಟಾದಶಾಂಗುಲ ಪ್ರಮಾಣಾನಿ; ಸಿಂಹ ವ್ಯಾಘ್ರವೃಕ ತರಕ್ಷ್ವೃಕ್ಷದ್ವೀಪಿ ಮಾರ್ಜಾರ ಶ್ರಗಾಲ ಮೃಗೇರ್ವಾರುಕ ಕಾಕ ಕಂಕ ಕುರರ ಚಾಸ ಭಾಸ ಶಶಘಾತ್ಯುಲೂಕ ಚಿಲ್ಲಿಶ್ಯೇನ ಗೃಧ್ರಕ್ರೌಂಚ ಭೃಂಗ ರಾಜಾಂಜಲಿ ಕರ್ಣಾವ ಭಂಜನ ನಂದೀಮುಖ ಮುಖಾನಿ, ಮಸೂರಾ ಕೃತಿಬಿಃ ಕೀಲೈರವಬದ್ಧಾನಿ, ಮೂಲೇಂಕುಶವದಾವೃತ್ತ ವಾರಂಗಾಣಿ, ಅಸ್ಥಿವಿದಷ್ಟ ಶಲ್ಯೋದ್ಧರಣಾರ್ಥ ಮುಪದಿಶ್ಯಂತೆ ॥೧೦॥

ಸ್ವಸ್ತಿಕ ಯಂತ್ರಗಳು ೧೮ ಅಂಗುಲ (ಉದ್ದಳತೆಯುಳ್ಳವು) ಇರ ತಕ್ಕದ್ದು. ಅವುಗಳ ಮುಖವು (ಅಗ್ರಭಾಗವು– ಸಿಂಹ ವ್ಯಾಘ್ರ, ಹುಲಿ), ವೃಕ (ತೋಳ,) ತರಕ್ಷು, ಚಿರ್ಚು, ಕರಡಿ, ದ್ವೀಪಿ, ಮಾರ್ಜಾರ (ಬೆಕ್ಕು),

† ಟೀಪು:— ಯಂತ್ರ ನಿರ್ಮಾಣ ಸಂಬಂಧಿ ವಾಗ್ಭಟದ ಸುವಚನ "ಅನೇಕ ರೂಪ ಕಾರ್ಯಾಣಿ ............ ಕಲ್ಪಯೇದ್ ಬುದ್ಧಾಛಿ ............" ನಾವು ಹಿಂದೆಯೇ ಎತ್ತಿ ತೋರಿಸಿದ್ದೇವೆ.

ಶೃಗಾಲ (ನರಿ) ಮೃಗೈರ್ವಾರುಕ (ಹರಿಣ–ಜಿಂಕೆ) ಕಾಕ (ಕಾಗೆ-Crow), ಕಂಕ (ಕಂಕಮಲ್ಲೋ ದೀರ್ಘಚಂಚುರ್ಮಹಾ ಪ್ರಮಾಣಃ; ಸುರಮಾ (ಸ್ವ)ಸಾತ ಇತ್ಯನ್ಯೇ- ಡಲ್ಹಣಃ) ಉದ್ದ ಚುಂಚು ಮತ್ತು ದೊಡ್ಡ ಆಕಾರಉಳ್ಳ ಪಕ್ಷಿ ವಿಶೇಷ, ಕೆಲವರ ವಿಚಾರದಲ್ಲಿ ಬಗಲಾ-ಬೆಳ್ಳಕ್ಕೆ, ಕುರರ [ಚಿಲ್ಹಾಕಾರಃ ನಾದೋತ್ಥಾಪಿತ ಮಚ್ಛ್ಯಃ, 'ಕುರಲ' ಇತಿಲೋಕೇ (ಡಲ್ಹಣಃ) ಟಿಟಹರೀಟೇಪಕ್ಕಿ, ಚಾಷಭಾಸ (ಗೋಕುಲದಲ್ಲಿ ಸಂಚಾರಮಾಡುವ ಗೃಧ್ರ ವಿಶೇಷವು ಎಂದು ಡಲ್ಹಣಃ) ಶಶಘಾತೀ (ಶರಾರಿ ಇತಿ ಲೋಕೇ, ಹಿಂಸ್ರ ಪಕ್ಷಿ ವಿಶೇಷಃ,) ಉಲೂಕ (ಗೂಗೆ) ಚಿಲ್ಲಿ (ಹದ್ದು) ಶ್ಯೇನ (ಬಾಜ,) ಗಿಡುಗ ಗೃಧ್ರ (ಹದ್ದು ಗೃಧ್ರೋ ಮಹಾಪ್ರಮಾಣಃ ಸಯೋಜನದೃಷ್ಟಿ ರಾಮಿಷಾಶೀ ಚೇತಿ ಡಲ್ಹಣಃ) ಕ್ರೌಂಚ (ಕೂಂಜ) ಭೃಂಗರಾಜ (ಕಾಲ ಚಟಕ, ಇತಿ ಪಾರಿಯಾತ್ರೀಯಃ— ಡಲ್ಹಣಃ; ಕರೀಬಣ್ಣದ ಒಂದು ಗುಬ್ಬಿಯು ಸಮಾನವಾದ ಪಕ್ಷಿ, ಅಂಜಲಿಕರ್ಣ, ಅವಭಂಜನ [ಅಂಜನಿ ಕರ್ಣಾವಭಂಜನಯೋಃ ಸುಶ್ರುತ ಚರಕಾದಿ ಟೀಕಾಸು ಪರ್ಯಾಯೋ ನದೃಶ್ಯತೆ. ತಸ್ಮಾತ್ ದೇಶಾಂತರೆ ಲೋಕಾದವಗಂತವ್ಯಮ್ (ಡಲ್ಹಣಃ) ಅರ್ಥಾತ್ ಈ ಎರಡು ಪಕ್ಷಿಗಳ ಪರ್ಯಾಯ (ನಾಮಾಂತರ) ಸುಶ್ರುತ ಚರಕಾದಿಗಳ ಟೀಕೆಗಳಲ್ಲಿ ಇರುವದಿಲ್ಲ; ಆದ್ದರಿಂದ ಎರಡನೇ ದೇಶಗಳ ಜನರಿಂದ ತಿಳಿಯುವ ಪ್ರಯತ್ನ ಮಾಡತಕ್ಕದ್ದು.] ನಂದೀಮುಖ (ಪತ್ರಾಟೀ ಡಲ್ಹಣಃ) ಈ ೨೪ ಪಶುಪಕ್ಷಿಗಳ (೯ ಪಶು ಮತ್ತು ೧೫ ಪಕ್ಷಿಗಳ) ಮುಖಗಳ ಸದೃಶವಾಗಿ ಯಂತ್ರಗಳ ಮುಖಗಳೂ ಆಗತಕ್ಕದ್ದು. ಮಸೂರಾಕಾರದ

---

* ಸ್ವಸ್ತಿಕ ಯಂತ್ರಗಳ ಸಂಬಂಧದಲ್ಲಿ ವಾಗ್ಭಟದ ವಚನವನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿರಿ— "ತುಲ್ಯಾನಿ ಕಂಕ ಸಿಂಹರ್ಕ್ಷಕಾಕಾದಿ ಮೃಗಪಕ್ಷಿಣಾಮ್। ಮುಖೈರ್ಮುಖಾನಿ ಯಂತ್ರಾಣಾಂ ಕುರ್ಯಾತ್ತತ್ಸಂಜ್ಞಕಾನಿಚ ॥೩॥ ಅಷ್ಟಾದಶಾಂಗುಲಾ ಯಾಮಾನ್ಯಾಯಸಾನಿ ಚ ಭೂರಿಶಃ। ಮಸೂರಾಕಾರ ಪರ್ಯಂತೈಃ ಕಂಠೆ ಬದ್ಧಾನಿ ಕೀಲಕೈಃ ॥೬॥ ವಿದ್ಯಾತ್ ಸ್ವಸ್ತಿಕ ಯಂತ್ರಾಣಿ ಮೂಲೇಂಕುಶನತಾನಿಚ। ತೈರ್ದೃಢೈ ರಸ್ಥಿಸಂಲಗ್ನ ಶಲ್ಯಾಹರಣ ಮಿಷ್ಯತೆ" ॥೭॥ (ಅ, ಸೂ. ಅ. ೩೪) ಯಂತ್ರಗಳ ಮುಖವು (ಅಗ್ರಭಾಗವು- ಯೇನ ಪಾರ್ಶ್ವೇನ ಶಲ್ಯಮುದ್ಧ್ರಿಯತೆ ತದ್ಯಂತ್ರಾ

ಕೀಲಗಳಿಂದ ಈ ಯಂತ್ರಗಳು ಜೋಡಿಸಲ್ಪಟ್ಟಿರಬೇಕು. ಇವುಗಳ ಮೂಲವು (ಹಿಡಿಯತಕ್ಕ ಸ್ಥಳವು) ಅಂಕುಶದಂತೆ ಮಣಿದದ್ದು ಅಥವಾ ದುಂಡಗಾಗಿ ಇರತಕ್ಕದ್ದು. ಈ ಯಂತ್ರವು ಅಸ್ಥಿಗಳಲ್ಲಿ ಸಿಗಿಬಿದ್ದ (ನಟ್ಟ) ಗಂಭೀರವಾದ ಶಲ್ಯಗಳ ಉದ್ಧರಣಾರ್ಥವಾಗಿ (ನಿಷ್ಕಾಸನಾರ್ಥ- ಹೊರಗೆ ತೆಗೆಯುವದರ ಸಲುವಾಗಿ) ಪ್ರಯುಕ್ತವಾಗಿರುತ್ತದೆ.



ಸ್ವಸ್ತಿಕ ಯಂತ್ರಗಳ ಆಕೃತಿ ಮತ್ತು ಸಂಜ್ಞೆಯು:- ಸ್ವಸ್ತಿಕ ಯಂತ್ರಗಳು ದೃಢವಾದ ಲೋಹಗಳ ಎರಡು ಫಲಕೆ (Blades) ಗಳು ಅಥವಾ ಸ್ಥೂಲ ಪಟ್ಟಿಗಳಿಂದ ಆಗುತ್ತವೆ. ಈ ಫಲಕೆಗಳ ಮಧ್ಯದಲ್ಲಿ ಒಂದು ದೃಢವಾದ ಕೀಲ (Nail) ವು ಇರುತ್ತದೆ. ಯಾವ ಎರಡೂ ಶಿರಗಳು ಚನ್ನಾಗಿ ಬೇಳೆಯಾಕಾರ ದುಂಡಗಾಗಿ ಸ್ಥೂಲ ಅಥವಾ ಮುಚ್ಚಳಯುಕ್ತ(Capped) ಇರುತ್ತವೆ. ಯಾಕಂದರೆ ಫಲಕೆಗಳು ಬೇರೆ ಬೇರೆ ಆಗಬಾರವು. ಎಲ್ಲಿ ಕೀಲವಿರುತ್ತದೋ ಆ ಭಾಗಕ್ಕೆ ವಾಗ್ಭಟಕಾರರು 'ಕಂಠ' ಎಂದಿದ್ದಾರೆ. ಕಂಠವು ಫಲಕೆಗಳ ನಟ್ಟ ನಡು ಇರುವದಿಲ್ಲ. ಆದ್ದರಿಂದ ಅದು ಸ್ವಸ್ತಿಕ ಯಂತ್ರವನ್ನು ಎರಡು ವಿಷಮ ಭಾಗದಲ್ಲಿ ಭಾಗಮಾಡುತ್ತದೆ. ಅದರ ಅಗ್ರಭಾಗವು ಯಾವದಕ್ಕೆ ಮುಖ (Head) ಅನ್ನುತ್ತಾರೋ ಅದು ಸಂಣದಿರುತ್ತದೆ. ಮತ್ತು ಮೂಲಭಾಗವು (ಗ್ರಹಣಸ್ಥಾನ ಹಸ್ತಗ್ರಹ, ಮುಷ್ಟಿ,- Handle, ಹಿಡಿಕೆ) ದೊಡ್ಡದು. ಸ್ವಸ್ತಿಕ ಯಂತ್ರವನ್ನು ತೆರೆಯಲು ಫಲಕೆಗಳು ಬೇರೆಯಾಗಿ ೪ ಭಾಗಗಳು ಕಾಣಿಸುತ್ತವೆ. ಆ ಸಮಯದಲ್ಲಿ ಈ ಸ್ವಸ್ತಿಕ ಯಂತ್ರವು ಶ್ರೀ ಗಣೇಶನ ಮಂಗಲ ಚಿನ್ಹ, § ಏಸೂಕ್ರಿಸ್ತನ ಕ್ರಾಸ ಅಥವಾ ಶೂಲ (ವಸ್ತುತಃ ಶೂಲವು † ) * ಮತ್ತು ಹಿಟ್ಲರನಿಂದ ಪ್ರಚ

---

ಣಾಂ ಮುಖಂ ವೇದ್ಯಂ ಇತ್ಯರುಣದತ್ತಃ) ಬಕ, ಸಿಂಹ, ಕರಡಿ, ಕಾಗೆ ಮೊದಲಾದ ಪಕ್ಷಿಗಳ ಮತ್ತು ಮೃಗಗಳ ಮುಖಗಳ ಸಮಾನ ಮಾಡತಕ್ಕದ್ದು, ಮತ್ತು ಅವುಗಳ ಹೆಸರೂ ಸಹ ಅವುಗಳ ಸಂಜ್ಞಕ ಇರತಕ್ಕದ್ದು. ಉದಾ:— ಕಂಕಮುಖ, ಸಿಂಹ ಮುಖಾದಿ, ೧೮ ಅಂಗುಲ ಉದ್ದ ಮತ್ತು ಬಹುಶಃ- ಆಯಸಕೃತ (ಲೋಹಕೃತ) ಇರತಕ್ಕದ್ದು, ಕಂಠದಲ್ಲಿ ಅಂದರೆ ಮಧ್ಯದಲ್ಲಿ (ಎರಡೂ ಹೊಳಿಕೆ ಭಾಗಗಳನ್ನು) ಜೋಡಿಸಿ ಮೊಳೆಯಿಂದ

ರಿತವಾದ ಜರ್ಮನಿಯ ಧ್ವಜ ಸ್ವಸ್ತಿಕಾ (Swastika 卐 ) ದ ಸದೃಶ (ಚತುರಂಗಿ) ವಾಗಿ ಭಾಸವಾಗುತ್ತದೆ. ಇದೇ ಕಾರಣದಿಂದ ಈ ಯಂತ್ರಗಳ ಸಂಜ್ಞೆಯು ಸ್ವಸ್ತಿಕ (ಕಲ್ಯಾಣಕಾರೀ) ಎಂದು ಇಡಲಾಗಿದೆ. ಸ್ವಸ್ತಿ ವಾಚನ ಮಂತ್ರಗಳ ಭಾವವಾದರೂ ಇದೇ ಇರುತ್ತದೆ. ಶಲ್ಯವನ್ನು ಹೊರ ತೆಗೆದು ಇವು ರೋಗಿಯ ಕ್ಷೇಮವನ್ನು ಮಾಡುತ್ತವೆ. ಆದ್ದರಿಂದ ಸ್ವಸ್ತಿಕ ಎಂಬ ಸಂಜ್ಞೆಯು ಸಾರ್ಥಕವಿರುತ್ತದೆ.

ಸ್ವಸ್ತಿಕ ಯಂತ್ರಗಳಿಗೆ ದೇಶೀ ಭಾಷೆಯಲ್ಲಿ 'ಜಂಬೂರ, (ಫಾರಸೀ ಜಂಬೂರ) ಮತ್ತು ಆಂಗ್ಲಭಾಷೆಯಲ್ಲಿ (ಫಾರ್ಸೆಪ್ಸ) ಅಥವಾ ಪಿನ್‌ಸರ್ಸ ಅನ್ನುತ್ತಾರೆ.

**ನಾಮಕರಣ ವಿಧಿ ಮತ್ತು ಪ್ರಕಾರ:—** ಯಾವ ಪ್ರಾಣಿಯ ಮುಖದ ಸದೃಶವಾಗಿ ಯಂತ್ರಗಳಿರುತ್ತವೆಯೋ ಅದೇ ಅದರ ಹೆಸರೆಂದು ತಿಳಿಯತಕ್ಕದ್ದು. ಉದಾ:— ಸಿಂಹ ಮುಖ, ಕಾಕಮುಖ, ಶ್ಯೇನಮುಖ (Hawk Foreeps) ಇತ್ಯಾದಿಗಳು. ಋಷಿಗಳು ಈ ಯಂತ್ರಗಳಿಗೆ ತಮ್ಮ ಹೆಸರನ್ನು ಪ್ರಸಿದ್ಧಿ ಪಡಿಸದೆ ಪ್ರಾಣಿಗಳ ಹೆಸರಿನಿಂದ ಪ್ರಸಿದ್ಧಿ ಪಡಿಸಿದ್ದಾರೆ. ಯಾಕಂದರೆ ಅವುಗಳ ಆಕೃತಿಯು ಸದಾ ಕಾಲದಲ್ಲಿ ತಿಳಿಯಲಿಕ್ಕೆ ಬರಲಿ ಎಂಬ ಸದಿಚ್ಛೆಯಿಂದ ಪ್ರಾಣಿಗಳ ಹೆಸರಿಟ್ಟದ್ದಾರೆ. ಅವರಿಗೆ ತಮ್ಮ ಹೆಸರಿನ ಪ್ರಸಿದ್ಧಿಯ ಇಚ್ಛೆ ಇದ್ದಿದ್ದಿಲ್ಲ. ತದ್ವಿಪರೀತವಾಗಿ ಇತ್ತೀಚೆಗೆ ಆವಿಷ್ಕಾರ ಅಥವಾ (ಸಂಶೋಧನ) ಅನ್ವೇಷಣ ಮಾಡುವ ಮಹಾಶಯರು ಯಂತ್ರ, ಶಸ್ತ್ರ ಅಥವಾ ಔಷಧಿಗಳನ್ನು ತಮ್ಮ ಹೆಸರಿನಿಂದ ಪ್ರಸಿದ್ಧಿಯಾಗಬೇಕೆಂಬ

---

ಹೊಂದಿಸಿ ಬಿಡತಕ್ಕದ್ದು. ಈ ಪ್ರಕಾರದ ಯಂತ್ರಗಳಿಗೆ ಸ್ವಸ್ತಿಕ ಯಂತ್ರಗಳೆಂದು ಅನ್ನುತ್ತಾರೆ. ಮೂಲದಲ್ಲಿ (ಯತ್ರ ಪ್ರದೇಶೇ ಯಂತ್ರಾಣಾಂ ಹಸ್ತಗ್ರಹಸ್ತತ್ರ ತನ್ಮೂಲ ಮಿತ್ಯರುಣ ದತ್ತಃ) ಅಂಕುಶ (Hook) ದಂತೆ ಮಣಿದವು (ವಕ್ರ–ಬಗ್ಗಿದವು) ಇರಬೇಕು. ಈ ದೃಢ ಯಂತ್ರಗಳಿಂದ ಅಸ್ಥಿಗಳಲ್ಲಿ ಸಿಕ್ಕಿಕೊಂಡ ಶಲ್ಯಗಳು ತೆಗೆಯಲ್ಪಡುತ್ತವೆ.

ಇಲ್ಲಿ ವಾಗ್ಭಟಕಾರರು ಸುಶ್ರುತೋಕ್ತ ಎಲ್ಲ ಪಶು – ಪಕ್ಷಿಗಳ ಹೆಸರುಗಳನ್ನು ಕೊಟ್ಟಿರುವದಿಲ್ಲ. ಕೇವಲ ಪಕ್ಷಿಗಳಲ್ಲಿ ಕಾಗೆ ಮತ್ತು ಕಂಕ, ಮತ್ತು ಪಶುಗಳಲ್ಲಿ ಸಿಂಹ ಮತ್ತು ಋಕ್ಷ (ಕರಡಿ) ಯ ಹೆಸರನ್ನು

ಪ್ರಯುಕ್ತ ಮಾಡುತ್ತಾರೆ. ಉದಾ:— Kocher's gland forcep volkmann's sharp spoon, syme's knife, pove powder, etc. ಕೆಲವು ಹೆಸರುಗಳು ಕ್ರಿಯಾ, ರೋಗ, ಆಕಾರ ಅಥವಾ ಸ್ಥಾನಗಳನ್ನು ಆಶ್ರಯಿಸಿವೆ. ಯಾಕಂದರೆ Artery Forceps (ಧಮನ್ಯಸ್ರರಕ್ತ* ಗ್ರಾಹಿ ಸ್ವಸ್ತಿಕಯಂತ್ರ), Na sal Forceps (ನಾಸಾ ಸ್ವಸ್ತಿಕಾ) ಅಥವಾ Dental Forceps (ದಂತ ಸ್ವಸ್ತಿಕಾ) ಇತ್ಯಾದಿ. ಈ ರೀತಿಯಾಗಿ ನವ ಲ್ಲಿಯೂ ಗರ್ಭಶಂಕು, ಮಂಡಲಾಗ್ರ, ಅರ್ಶೋಯಂತ್ರಾದಿಗಳ ಶಬ್ದಗಳು ಸಿಗುತ್ತವೆ. ಕೆಲವು ಕಡೆಗೆ ಪಾಶ್ಚಿಮಾತ್ಯರೂ ಸಹ ಪಶು ಪಕ್ಷಿಗಳ ಹೆಸರಿ ಮೇಲೆ ಯಂತ್ರಗಳ ಹೆಸರನ್ನೂ ಇಟ್ಟಿದ್ದಾರೆ. ಉದಾ :— Lion Forceps (ಸಿಂಹಮುಖಿ) Mouse-teeth Forceps (ಮೂಷಿಕ ಮುಖಿ) Bulldog Forceps (ಶ್ವಾಮುಖ ಯಂತ್ರ)Hawk-bill (ಶ್ಯೇನಮುಖ ಯಂತ್ರ) Crocodile Forceps (ಮಕರ ಮುಖ ಯಂತ್ರ) ಇತ್ಯಾದಿ

ಸುಶ್ರುತೋಕ್ತ ೨೪ ಯಂತ್ರಗಳಲ್ಲಿ ಸಿಂಹದಿಂದ ಹಿಡಿದು ಮೃಗೈವಾ ರುಕದ ವರೆಗೆ ೯ಯಂತ್ರಗಳಂತೂ ಪಶುಗಳ ಹೆಸರಿನ ಮೇಲೆ ಪ್ರಸಿದ್ಧವಿರು ತ್ತವೆ. ಮತ್ತು ಉಳಿದ ೧೫ ಯಂತ್ರಗಳು ಪಕ್ಷಿಗಳ ಹೆಸರಿನವು ಇರುತ್ತವೆ. ಪಶುಗಳಮುಖಗಳು ಸ್ಥೂಲವಿದ್ದುದರಿಂದ ಅದೇ ಪ್ರಕಾರವಾಗಿ ಯಂತ್ರಗಳು ಬಹುಶಃ ಸ್ಥೂಲ ಮತ್ತು ದೃಶ್ಯ (ಕಾಣಿಸುವ) (Visible) ಶಲ್ಯಗಳನ್ನು ಹಿಡಿಯುವ ಅಥವಾ ತೆಗೆಯುವಕೆಲಸದಲ್ಲಿ ಬರುತ್ತವೆ. ಮತ್ತು ಪಕ್ಷ್ಯಾಕಾರ ಯಂತ್ರಗಳಮುಖಗಳು ಪಕ್ಷಿಗಳಚುಂಚಿನಂತೆ ಉದ್ದ ಮತ್ತು ತೆಳ್ಳಗಾಗಿ ಇರು ವದರಿಂದ ಗೂಢ ಮತ್ತು ಅದೃಶ್ಯ (ಕಾಣಿಸದ) Deep and invisible ಶಲ್ಯಗಳ ಗ್ರಹಣ ಮತ್ತು ನಿಷ್ಕಾಸನಾರ್ಥವಾಗಿ ಪ್ರಯುಕ್ತವಾಗುತ್ತವೆ.

---

ಕೊಟ್ಟಿದ್ದಾರೆ. ಉಳಿದವುಗಳನ್ನು 'ಇತ್ಯಾದಿ' ಎಂಬ ಶಬ್ದದ ಅಂತರ್ಗತ ವೆಂದು ತಿಳಿಯತಕ್ಕದ್ದು. ಮುಖ್ಯವಾಗಿ ಸಿಂಹಮುಖ ಮತ್ತು ಕಂಕಮುಖ ಇವೇ ಇರುತ್ತವೆ. ಇವುಗಳ ಚಿತ್ರವನ್ನು ನಾವು ಈ ಪುಸ್ತಕದಲ್ಲಿ ಕೊಟ್ಟಿರು ತ್ತೇವೆ. ವಾಗ್ಭಟಕಾರರು 'ಕಂಠ' ಎಂಬ ಶಬ್ದವನ್ನು ಕೊಟ್ಟು ಉತ್ತಮ ಬುದ್ಧಿಮತ್ತೆಯನ್ನು ಪ್ರಕಾಶ ಮಾಡಿದ್ದಾರೆ. ಇದು ಯಂತ್ರದ ಇಂಥ ಭಾಗವು

ಸುಶ್ರುತಕಾರರು ಯಾವ ಪಶು ಪಕ್ಷಿಗಳ ಹೆಸರನ್ನು ಸ್ವಸ್ತಿಕ ಯಂತ್ರಗಳ ವರ್ಣನೆಯಲ್ಲಿ ಕೊಟ್ಟಿದ್ದಾರೋ ಅವುಗಳಲ್ಲಿ ಬಹುತರವಾಗಿ ಪ್ರಸಿದ್ಧವು ಮತ್ತು ತಿಳಿದವುಗಳು ಇರುತ್ತವೆ. ಉದಾ:— ಸಿಂಹ, ವ್ಯಾಘ್ರ, ವೃಕ, ತರಕ್ಷು* ಕಾಕ, ಗೃಧ್ರ, ಶ್ಯೇನ ಇತ್ಯಾದಿ. ಮತ್ತು ಕೆಲವು ಸಂದಿಗ್ಧ ಅಥವಾ ಅಜ್ಞಾತ (ತಿಳಿಯದವು) ಇರುತ್ತವೆ.

ಉದಾ: ಮೃಗೈರ್ವಾರುಕಂಕ,ಅಂಜಲಿಕರ್ಣಾದಿಗಳು. ಇವುಗಳವಿಷಯದಲ್ಲಿ ಡಲ್ಹಣನು ಸಹ ಸಂದೇಹ ಅಥವಾ ಅಜ್ಞಾನವನ್ನು ಪ್ರಕಟಿಸಿದ್ದಾನೆ.

‡ ಇದರಿಂದ ಹೀಗೆ ತಿಳಿಯುತ್ತಲಿದೆ ಏನಂದರೆ –ಯಾವ ಪಶು ಪಕ್ಷಿಗಳು ಸುಶ್ರುತರ ಕಾಲದಲ್ಲಿ ಇದ್ದವೋ ಅವುಗಳಲ್ಲಿ ಕೆಲವುಡಲ್ಹಣನ ಕಾಲವರೆಗೆ ನಾಶವಾಗಿರಬೇಕು. ಮತ್ತು ಅನಂತರವೂ ಕೆಲವು ಲುಪ್ತಪ್ರಾಯವಾಗಿರಬೇಕು. ಅಥವಾ ದೇಶಾಂತರಕ್ಕೆ ಹೋಗಿರಬೇಕು. (Zoology) ಪ್ರಾಣಿವಿಜ್ಞಾನಶಾಸ್ತ್ರದ ಅನುಸಾರವಾಗಿ ಕಾಲ ಪ್ರಭಾವದಿಂದ ಪ್ರಾಣಿಗಳ ಎಷ್ಟೋ ಜಾತಿಗಳು ನಷ್ಟ (Extinct) ಆಗುತ್ತಿವೆಯೆಂದೂ ಮತ್ತು ಕೆಲವು ಹೊಸ ಅಥವಾ ರೂಪಾಂತರ ಜಾತಿಗಳು (Species) ಹುಟ್ಟುತ್ತವೆ ಯೆಂದೂ ನೆನಪಿನಲ್ಲಿಡತಕ್ಕ ಮಹತ್ವದ ಸಂಗತಿಯಾಗಿದೆ.

---

ಯಾವದರಲ್ಲಿ ಕೀಲವನ್ನು ನಡಿಸಿರುತ್ತಾರೆ. ಇದರಿಂದ ಯಂತ್ರವು ಎರಡು ಭಾಗಗಳಲ್ಲಿ ವಿಭಕ್ತವಾಗುತ್ತದೆ. (೧) ಯಾವುದಕ್ಕೆ ಮುಖವೆಂದೆನ್ನುತ್ತಾರೋ ಅದು ಸಣ್ಣಭಾಗವು. (೨) ಯಾವದರಿಂದ ಹಿಡಿದುಕೊಳ್ಳುತ್ತಾರೋ ಅದು ಮೂಲವು. ಇದಕ್ಕೆ ಅರುಣದತ್ತನು ಹಸ್ತಗ್ರಹ (ಹಿಡಿಕೆ) ಎಂದಿದ್ದಾನೆ. ಮೊದಲನೇ ಭಾಗವು (ಮುಖ) ಸಣ್ಣದಿರುತ್ತದೆ. ಮತ್ತು ಎರಡನೇ ಭಾಗವು (ಮೂಲ) ದೊಡ್ಡದಿರುತ್ತದೆ. ಎರಡನೇ ಭಾಗವು ಎಷ್ಟು ದೊಡ್ಡದಿರುತ್ತದೋ ಮುಖವು ಅಷ್ಟು ಗಟ್ಟಿಯಾಗಿ ಶಲ್ಯವನ್ನು ಹಿಡಿಯುತ್ತದೆ. ಯಾವ ಪ್ರಕಾರ ಪ್ರಾಣಿಗಳ ಶಿರೋಭಾಗದ ಕೆಳಗಡೆ ಕಂಠ (ಕುತ್ತಿಗೆ) ಇರುತ್ತದೋ ಅದೇ ಪ್ರಕಾರ ಯಂತ್ರಗಳ ಮುಖದ ಸಮೀಪ ಅಥವಾ ಕೆಳಗೆ ಕಂಠವು ಇರತಕ್ಕದ್ದು. ಇದೇ ರೀತಿಯಾಗಿ ಹಸ್ತಗ್ರಹವು ಉದ್ದವಾಗಿರತಕ್ಕದ್ದು.

ವಾಗ್ಭಟಕಾರರು ಕೇವಲ ೩-೪ ಪಶುಪಕ್ಷಿಗಳ ಹೆಸರನ್ನು ಕೊ
ಕ್ರಿಯಾತ್ಮಕ ಭಾವವನ್ನು ಪ್ರದರ್ಶಿಸಿದ್ದಾರೆ. ಆದರೆ ಸುಶ್ರುತರು ಈ ಸ್ಥ
ಮತ್ತು ಮುಂದೆ ಅಧ್ಯಾಯ ೪೬ರಲ್ಲಿ ಮಾಂಸ ವರ್ಗದಅಂತರ್ಗತವಾಗಿ
ಮತ್ತು ಚರಕಾಚಾರ್ಯರೂ ಸೂತ್ರಸ್ಥಾನ ಅಧ್ಯಾಯ ೨೭ ರಲ್ಲಿ ಮಾ
ವರ್ಗದ ಉಲ್ಲೇಖವನ್ನು ಮಾಡುತ್ತ ನಾನಾವಿಧವಾದ ಪಶುಪಕ್ಷಿಗಳ ಹೆ
ಗಳನ್ನೂ ಮತ್ತು "ಭೂಮಿಶಯಾಃ ವಾರಿಚರಾಃ" ಇತ್ಯಾದಿಗಳ ಸ್ವಭಾ
ವನ್ನು ಕೊಟ್ಟು ಪ್ರಾಚೀನಕಾಲದ ಪ್ರಾಣಿವಿಜ್ಞಾನಶಾಸ್ತ್ರ (Zoology)
ರಕ್ಷಣೆಯನ್ನು ಮಾಡಿದ್ದಾರೆ.

ಪ್ರಯೋಗ (Use)— ಸುಶ್ರುತರು ಮತ್ತು ವಾಗ್ಭಟಕಾರರು ಅದೇ
ಕೊಟ್ಟಂತೆ ಬಾಣ ಮೊದಲಾದ ಶಲ್ಯಗಳು ಅಸ್ಥಿಗಳಲ್ಲಿ ನಟ್ಟಿದ್ದರೂ ಸ
ಅವನ್ನು ತೆಗೆಯಲಿಕ್ಕೆ ಸ್ವಸ್ತಿಕ ಯಂತ್ರಗಳು ಉಪಯೋಗ ಬೀಳುತ್ತಲಿದ್ದವು
ಶಲ್ಯಗಳು ಸಣ್ಣವು ಮತ್ತು ದೊಡ್ಡವೆಂದು ನಾನಾರೂಪವಾಗಿರುವದರಿಂ
ಮತ್ತು ದೇಹದ ಬೇರೆ ಬೇರೆ ಭಾಗಗಳಲ್ಲಿ ನಟ್ಟಿರುವದರಿಂದ ನಾನಾರೂ
ವಾದ ಯಂತ್ರಗಳ ಉಪಯೋಗದ ಆವಶ್ಯಕತೆಯೂ ಬಿದ್ದಿತು. ಒಂದೆ
ಯಂತ್ರವು ಶರೀರದಲ್ಲಿ ಸರ್ವತ್ರ ಕೆಲಸ ಮಾಡಲಾರದು. ಈಗ ನಾ
ಕೆಲವು ಸ್ವಸ್ತಿಕ ಯಂತ್ರಗಳ ಬೇರೆ ಬೇರೆ ಎರಡು ಭಾಗಗಳ ವರ್ಣ
ಯನ್ನು ಮಾಡುವಾ.

---

§ ಓಂದ ವಕ್ರಗೆರೆಗಳನ್ನು ಸರಿಮಾಡುವದರಂದಲೂ ಸ್ವಸ್ತಿ
ಕೃತಿ ಆಗುತ್ತದೆ.

* ಏಸುಕ್ರಿಸ್ತರು ಜಗತ್ಕಲ್ಯಾಣಾರ್ಥವಾಗಿ ಶೂಲಕ್ಕೆ ಏರಲ್ಪಟ್ಟಿದ್ದರು.

Pincers— a gripping tool with short jaw
or Pliers (ಪಲಾಸ) Like.

§ ಇತ್ತೀಚೆಗೆ ಲಖನೌದ ಕಡೆಗೆ ಈ ಪಶುವು ಎಂಬುವುದು ಬಹ
ಆತಂಕವನ್ನು ಹಬ್ಬಿಸುತ್ತಲಿದೆ. ಕುರಿ, ಆಡು, ಸಣ್ಣ ಹುಡುಗರು ಮತ್ತು
ಯುವಕರನ್ನು ಸಹ ಎತ್ತಿಕೊಂಡು ಹೋಗುತ್ತದೆ.

† ವಿದ್ಯಾರ್ಥಿಗಳಿಗೆ ಪಶು ಪಕ್ಷಿಗಳ ಪರಿಚಯಾರ್ಥವಾಗಿ (ಪ
ಚಯದ ದಶೆಯಿಂದ) ಯಾವದಾದರೂ ಜಂತ್ವಾಲಯ (ಮೃಗಾಲಯ)
[Zoo] ಕ್ಕೆ ಹೋಗಿ ಜ್ಞಾನ ಮಾಡಿಕೊಳ್ಳತಕ್ಕದ್ದು.

೧) ಸಿಂಹ ಮುಖ— ಇದಕ್ಕೆ ಆಂಗ್ಲಭಾಷೆಯಲ್ಲಿ Lion Forceps (ಸಿಂಹಮುಖದವಡೆ) ಅನ್ನುತ್ತಾರೆ. ಅಥವಾ Fergusson's lion jaw ಅರ್ಥಾತ್ ಸಿಂಹಮುಖೀ ದವಡೆ ಡಾ॥ ಫರ್ಗುಸನ್ ಮಹೋದಯನು ಇದನ್ನು ಮೊಟ್ಟ ಮೊದಲು ಶೋಧ (ಅನ್ವೇಷಣ) ಮಾಡಿ ನಿರ್ಮಾಣ ಮಾಡಿದ್ದನು. ಆದ್ದರಿಂದ ಅವನ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಯಂತ್ರವು ಈಗೂ ದೊರೆಯುತ್ತದೆ. ಮತ್ತು ಶಸ್ತ್ರ ಕರ್ಮ (Operations) ದಲ್ಲಿ ವಿಶೇಷ ಉಪಯೋಗಿಸಲ್ಪಡುತ್ತದೆ. ಇದರ ಹಿಡಿಕೆಯು (Handle) ಅಗಲವಾಗಿರುತ್ತದೆ. ಮತ್ತು ಮುಖದಲ್ಲಿ ಸಿಂಹದಂತೆ ಕೋರೆಯು ಹಲ್ಲುಗಳಿರುತ್ತವೆ. ಈ ಯಂತ್ರವು ನಿಕ್ಕಲ (Nickel- plated) ಧಾತುವಿನ ಆವರಣವಿರುವದದರಿಂದ ಚಿರಕಾಲದವರೆಗೆ ಬಾಳುತ್ತದೆ. ಒಂದು ಪುಸ್ತಕದಲ್ಲಿ ಇದರವರ್ಣನೆಯು ಹೀಗಿದೆ.

Bone-holding Forceps :—

Fergusson's–Also kown as 'Lion Forceps' because of its resemblance to the jaws of a Lion when opened. Blades have stout and blunt teeth Used to catch the bone-ends, for manipulating them during the amputation etc.— A Guide to Surgical Instruments.

ಇದರ ಭಾವವನ್ನು ನಾವು ಮೇಲೆಯೇ ಕೊಟ್ಟಿದ್ದೇವೆ. ಪ್ರಯೋಗದ ಸಂಬಂಧದಲ್ಲಿ ಕೆಲವು ಮತಭೇದಗಳುಂಟು. ಅರ್ಥಾತ್ ಇತ್ತೀಚೆಗೆ ಅಸ್ಥಿ

(*) ವಾಗ್ಭಟಕಾರರು ಸ್ವಲ್ಪಪರಿವರ್ತನಪೂರ್ವಕವಾಗಿ ಈ ಶ್ಲೋಕವನ್ನು ತನ್ನ ಗ್ರಂಥದಲ್ಲಿ ಕೊಟ್ಟಿದ್ದಾರೆ. "ನಿವರ್ತತೆ ಸಾಧ್ವವಗಾಹತೆ ಚ ಗ್ರಾಹ್ಯಂಗ್ರಹೀತ್ವೋದ್ಧರತೇ ಚ ಯಸ್ಮಾತ್ । ಯಂತ್ರೇಷ್ವತಃ ಕಂಕಮುಖಂ ಪ್ರಧಾನಂ ಸ್ಥಾನೇಷು ಸರ್ವೇಷ್ವಧಿಕಾರಿಯಚ್ಚ ॥೪೩॥ (ಅ ಹೃ. ಸೂ. ಅ. ೨೫.) ಇಲ್ಲಿ 'ಶಲ್ಯ' ಎಂಬ ಸ್ಥಾನದಲ್ಲಿ 'ಗ್ರಾಹ್ಯಂ' ಮತ್ತು ಚ್ಛೈವ' ಎಂಬುವ ಸ್ಥಾನದಲ್ಲಿ 'ಯಚ್ಚ' ಪ್ರಯೋಗವನ್ನು ಮಾಡಿದ್ದಾರೆ. ಅರ್ಥ ಮೊದಲಿನಂತೆ ಇದೆ.

ಯನ್ನು ಕತ್ತರಿಸುವ ಸಮಯದಲ್ಲಿ ಅದರ ತುದಿಗಳ (ಸಿರಗಳ) ನ್ನುಬಿಡತಕ್ಕದ ಯುವದಕ್ಕೋಸುಗ ಈ ಯಂತ್ರವು ಕೆಲಸಕ್ಕೆ ಬರುತ್ತದೆ. ಪರಂತು ಶಕ್ಯದ್ದು. ತರು ಇದರಿಂದ ಅಸ್ಥಿಗತ ಶಲ್ಯವನ್ನು ಹಿಡಿದು ಹೊರಗೆ ತೆಗೆಯುವದರಿಂದ ತೆಗೆ ಸುಗವೆಂದು ಬರೆದಿದ್ದಾರೆ. ಒಂದೇ ಯಂತ್ರದಿಂದ ಎಷ್ಟೋ ಕಾರ್ಯನೆಂದು ತಿ ಸಿದ್ಧಿಸುತ್ತವೆ. ಆದ್ದರಿಂದ ಇದು ಯಾವ ವಿವಾದಗ್ರಸ್ತ ವಿಷಯಇರುವಿದು ದು

ವ್ಯಾಘ್ರ, ತರಕ್ಷು ವೃಕಾದಿಗಳ ಮುಖಗಳ ಸಮಾನ ಯಂತ್ರಗಳಿವೆ. ಯ ಮಾಡಿಸಿ ಇದೇ ಪ್ರಕಾರ ಪ್ರಯೋಗದಲ್ಲಿ ಉಪಯೋಗಿಸುತ್ತಾರೆ.

೬. ಕಂಕಮುಖ— ಕಂಕವು ಯಾವ ಪಕ್ಷಿಯು ? ಡಲ್ಹಣನ ವನ್ನು ಹಿಂದೆಯೇ ನಾವು ಪುಟ (೮-೯) ರಲ್ಲಿ ಮಾಡಿದ್ದೇವೆ. ದೀರ್ಘ ಚುಂಚುವಿದ್ದ ದೊಡ್ಡ ಆಕಾರದ 'ಕಂಕಮಲ್ಲ' ಹೆಸರುಳ್ಳ ಯೆಂದು ಹೇಳಿದ್ದಾನೆ. 'ಸುರಮಾಸುತ ಇತ್ಯನ್ಯೆ' ಎರಡನೆಯವರ ವಿ ರದಲ್ಲಿ ಇದು ಸುರಮಾಸುತ ಎಂಬುವ ಪಕ್ಷಿ ಇದೆ. ಹೀಗೆಯೂ ಅವ ಬರೆದಿದ್ದಾನೆ. ಇದರಿಂದ ಹೀಗೆ ತಿಳಿಯುತ್ತದೆ. 'ಕಂಕ' ಪಕ್ಷಿಯ ವಿಷ ದಲ್ಲಿ ಡಲ್ಹಣನ ಕಾಲದಲ್ಲಿಯೂ ಮತ ಭೇದವಿತ್ತೆಂದು ತೋರುತ್ತದೆ. ಈ ಕೆಲವರು ಇದರ ಅರ್ಥವನ್ನು ಕೊಕ್ಕರೆ–ಬಕಪಕ್ಷಿ ಎಂದು ಮಾಡಿದ್ದಾರೆ ಇ ಬಕಪಕ್ಷಿಯಾಗಿದ್ದರೆ ಡಲ್ಹಣ ಅಥವಾ ಅರುಣದತ್ತನು ಕಂಕದ ಪರ್ಯಾ ಯಾರ್ಥವನ್ನು 'ವಕ'ಎಂದು ಬರೆಯುತ್ತಿದ್ದರು ....ನನ್ನ ವಿಚಾರದಲ್ಲಿ ಇ ಯಾವದೋ ಒಂದು ಉದ್ದ ಚುಂಚುಳ್ಳ ಬೃಹದಾಕಾರ ಪಕ್ಷಿಯು ಸುಶ್ರು ಸಮಯದಲ್ಲಿ ಪ್ರಸಿದ್ಧವಿತ್ತು. ತತ್‌ಪಶ್ಚಾತ್ ಇದರ ಲೋಪವಾಗಿ ಒಂದು ವೇಳೆ ಇದು ಈ ಕಾಲದಲ್ಲಿ ಇದ್ದರೂ ಸಹಿತ ಅದರ ಹೆಸರು ಹ ಮತ್ತೇನಾದರೂ ಬೇರೆ ಇರಬಹುದು. ಡಲ್ಹಣನಂತೂ ಇದು (ಕಂಕ ಜಲಚರಪಕ್ಷಿ ಇರುವದೆಂದು ಬರೆದಿರುವದಿಲ್ಲ. ಹೀಗಿದ್ದರೂ ನಾವು ಇದನ್ನು ವಕ, ಸರಸಾದಿ, ಎಂದು ತಿಳಿಯುತ್ತಿದ್ದೇವೆ. 'ವಕ' ಎಂಬ ಪಕ್ಷಿಯ ಚುಂಚು ಉದ್ದವಿರುತ್ತದೆ ಎಂಬುದು ನಿಜ. ಯಾವ ಉದ್ದ ಚುಂಚಿನಿ ನಿಂದ ಅದು ಜಲಗತ ಮೀನಗಳನ್ನು ಹಿಡಿದುಕೊಳ್ಳುತ್ತದೆ ಮತ್ತು ಅದು ಮಹಾ ಪ್ರಮಾಣವೂ (Of big size) ಇದೆ. ಆದರೂ ನಾವು 'ಕಂಕ ಅರ್ಥವನ್ನು 'ವಕ' ಎಂದು ಮಾಡದೇ ಈ ಪ್ರಶ್ನೆಯನ್ನು ಹೀಗೆಯೇ ಉಳಿ

ನ್ನುಬಿಡತಕ್ಕದ್ದು. ವಿದ್ವಾಂಸರು ಇವನ್ನು ವಿಚಾರ ಮಾಡಿ ನಿಶ್ಚಯ ಮಾಡ ತಕ್ಕದ್ದು. ಇದನ್ನು (Surgical instruments of the Hindus) ದಿಂದ ತೆಗೆದುಕೊಳ್ಳಲಾಗಿದೆ. ಇವನ್ನು ಕಲ್ಪನಾಮಾತ್ರ (Imaginary) ವೆಂದು ತಿಳಿಯತಕ್ಕದ್ದು.... ಚುಂಚು ಪಕ್ಷಿ ಸಮಾನವಿದೆ. ಮುಚ್ಚುವದರಿಂದ ಇದು ದುಂಡಗಾಗುತ್ತದೆ. ಛಿದ್ರದಲ್ಲಿ ಒಳ್ಳೇರೀತಿಯಿಂದ ಪ್ರವೇಶ ಹೊಂದು ತ್ತದೆ. ಯಾವಾಗ ಇದು ಗಂಭೀರವಾದ ಶಲ್ಯದವರೆಗೆ ಮುಟ್ಟಿದಕೂಡಲೇ ಇದನ್ನು (ಹಿಡಿಕೆಯನ್ನು ಒತ್ತುವದರಿಂದ) ತೆರೆದು ಶಲ್ಯವನ್ನು ಮೀನದಂತೆ ಹಿಡಿದುಕೊಳ್ಳುತ್ತದೆ. ಗಂಭೀರವಾದ ಮತ್ತು ಅದೃಶ್ಯವಾದ ಶಲ್ಯಗಳ ಸಲುವಾಗಿ ಈ ಯಂತ್ರವು ಬಹಳ ಉಪಯೋಗೀ ಇರುತ್ತದೆ. ಆದ್ದರಿಂದ ಸುಶ್ರುತರು ಕಂಕಮುಖ ಯಂತ್ರವನ್ನು ಉತ್ತಮವಾದ ಬೇರೆ ಬೇರೆ ಪ್ರಕಾರ ದಿಂದ ಪ್ರಶಂಸೆ ಮಾಡಿದ್ದಾರೆ. ಹೇಗೆಂದರೆ—

ನಿವರ್ತತೆ ಸಾಧ್ವವಗಾಹತೆ ಚ ಶಲ್ಯಂ ನಿಗ್ರಹ್ಯೋದ್ಧರತೆ ಚ ಯಸ್ಮಾತ್।
ಯಂತ್ರೇಷ್ವತಃ ಕಂಕಮುಖಂ ಪ್ರಧಾನಂ ಸ್ಥಾನೇಷು ಸರ್ವೇಷ್ವಧಿಕಾರಿ ಚೈವ ॥೨೧॥ (ಸು. ಸೂ. ಅ. ೭)

ಕಂಕಮುಖ ಯಂತ್ರವು ಒಳ್ಳೇರೀತಿಯಿಂದ ತಿರುಗಬಲ್ಲದು ಮತ್ತು ಅತ್ಯಂತ ಗಂಭೀರವಾದ ಶಲ್ಯದ ವರೆಗೆ ಮುಟ್ಟಿ ಮತ್ತು ಅದನ್ನು ಹಿಡಿದು ಕೊಂಡು ಹೊರಗೆ ತರುತ್ತದೆ. ಆದುದರಿಂದ ಕಂಕಮುಖವು ಎಲ್ಲ ಯಂತ್ರ ಗಳಲ್ಲಿ ಪ್ರಧಾನ ಮತ್ತು (ಶರೀರಗತ) ಎಲ್ಲಸ್ಥಾನ (ಅಂಗ, ಪ್ರತ್ಯಂಗ, ಪಕ್ಷ, ಉದರಾದಿ) ಗಳ ದೆಶೆಯಿಂದ ಉಪಯೋಗೀ ಇರುತ್ತದೆ.

ಇದರಿಂದ ಸುಶ್ರುತಕಾರರ ಸಮಯದಲ್ಲಿ ಈ ಯಂತ್ರದ ಉಪಯೋಗವು ಮತ್ತು ಪ್ರಸಿದ್ಧಿಯು ಶಸ್ತ್ರಕರ್ಮಗಳಲ್ಲಿ ಚನ್ನಾಗಿತ್ತೆಂದು ಪ್ರತೀತವಾಗುತ್ತದೆ. ಆದರೆ ವಿಷಾದಸಂಗತಿಯು-- ಇದು ನಮ್ಮ ಕಾಲದವರೆಗೆ ಮುಟ್ಟಲಿಲ್ಲಾ. ಈಗೂ ಉದ್ದ ಚುಂಚುಳ್ಳ ಯಂತ್ರಗಳು ಸಿಗುತ್ತವೆ. Ligature Forceps (or carrier) etc. ಆದರೆ ಇವುಗಳ ಉಪಯೋಗವು ಭಿನ್ನವಿದೆ. ಕಂಕಮುಖದಂತೆ ಯಾವೂ ಯಂತ್ರಗಳು ಸರ್ವತ್ರಗಾಮೀ ಅಂದರೆ ಎಲ್ಲ ಸ್ಥಾನಗಳಲ್ಲಿ ಪ್ರವೇಶಿಸಲು ಬರತಕ್ಕವು. ಈಗ ಸಿಗುವ

ದಿಲ್ಲ. ಪ್ರಸಂಗಾನುಸಾರವಾಗಿ ಪುನಃ ಎರಡು ಬೇರೆ ಯಂತ್ರಗಳನ್ನು ಕೊಡಲಾಗುವದು. ಅವು ವೈದ್ಯರಿಗೆ ಉಪಯೋಗಕಾರಿಯಾಗಿವೆ.

೧) ಶ್ಯೇನ ಮುಖ ಸ್ವಸ್ತಿಕ ಯಂತ್ರ.... .......

## ೧ (ಶ್ಯೇನಮುಖ) ವಿಶ್ವವ್ಯಾಪೀದಂತ ನಿಷ್ಕಾಸಕಯಂತ್ರ

ಇದು ಎಲ್ಲ ತರದ ಹಲ್ಲುಗಳನ್ನು ತೆಗೆಯುವ ಯಂತ್ರವಿದೆ. ಕೈ ರಿಂದ ಇದಕ್ಕೆ ಕಂಕಮುಖದಂತೆ Universal [ವಿಶ್ವವ್ಯಾಪೀ] ಎಂ ನಾಮವನ್ನು ಕೊಡಲಾಗಿದೆ.

ಪ್ರಕೃತ ಮೇಲಿನ ಮತ್ತು ಕೆಳಗಿನ ಹಲ್ಲುಗಳನ್ನು ಕಿತ್ತುವದ ಬೇರೆ ಬೇರೆ ಪ್ರಕಾರದ ಯಂತ್ರ (Forceps) ಗಳು ಸಿಗುತ್ತವೆ. ಆ ಇದೊಂದೇ ಎಲ್ಲ ತರದ ಹಲ್ಲುಗಳನ್ನು ಕೀಳಬಲ್ಲುದು. ಇದು ಉತ್ತ ವಾದ ಶಸ್ತ್ರಲೋಹ [ಉಕ್ಕು] (Fine Steel) ದಿಂದ ಆಗುತ್ತದೆ. ಮತ್ತ ಹಗುರು ಅಲ್ಲದೇ ದೃಢವಿರುತ್ತದೆ. ಇದರ ಮುಖದ ಹಿಂದಿನ ಭಾಗ (Tip) ಒಳಗಡೆ ಒಳ್ಳೇ ತೀಕ್ಷ್ಣ ಅಥವಾ ಹರಿತ (Notch) ಇರುತ್ತದೆ ವಿ ಪೂರ್ವಕವಾಗಿ ಹಿಡಿಕೆಯನ್ನು ಒತ್ತುವದರಿಂದ ಅದರಲ್ಲಿ ಪ್ರತ್ಯೇಕವಾ ಹಲ್ಲುಗಳು ಸಿಗಿಬೀಳುತ್ತವೆ. ಗ್ರಹಸ್ಥಾನ [ಹಿಡಿಕೆಯು] ಸ್ವಲ್ಪ ವಕ್ರ ಮತ್ತು ಒಳಗಿನಿಂದ ತೆರೆದದ್ದು [ನಡುವೆ ಪೊಳ್ಳು ಇದ್ದದ್ದು] ಮತ್ತು ಉದ್ದವಾಗಿ ತ್ತದೆ. ಇದು ಕೊನೆಯ [ಹನು] ಗದ್ದದವರೆಗೆ (Molar teeth) ಮುಟ್ಟು ತ್ತದೆ. ಇದರ ಪ್ರಯೋಗವು ಯಾವನಾದರೂ ದಕ್ಷನಾದ ದಂತ ಚಿಕಿತ್ಸಕನಿಂ (Dentist) ಕಲಿತುಕೊಳ್ಳತಕ್ಕದ್ದು. ಅನ್ಯಥಾ ಅಜ್ಞಾನ ವಶದಿಂದ ಹಲ್ಲು ತೆಗೆಯುವದರ ಬದಲಾಗಿ ಹಲ್ಲು ಮುರಿಯುತ್ತವೆ. ಅಥವಾ ರಕ್ತವು ಇಷ್ಟು ಸೋರುವದು, ಅದನ್ನು ಬಂದು ಮಾಡುವದೂ ಸಹ ಕಠಿಣವಾಗುವದು. ಇಲ್ಲವೇ ಅಸಹ್ಯವಾದ ವೇದನೆಯಾಗುವದು.

ಇದರ ಹೊರತಾಗಿ ಒಂದು Root Forceps (ದಂತ ಮೂಲ ಸ್ವಸ್ತಿಕಾ) ಇರುತ್ತದೆ. ಅದು ಮುರಿದ ದಂತಗಳ ಬೇರು (Stumps) ಗಳನ್ನು ತೆಗೆಯುವದರ ದೆಶೆಯಿಂದ ಉಪಯೋಗಿ ಇರುತ್ತದೆ.

# ಧಮನೀಗ್ರಾಹೀ ಸ್ವಸ್ತಿಕಯಂತ್ರ

Artery Forceps. ಆರ್ಟರೀ ಫಾರ್ಸೆಪ್ಸ ಸಂಣದು ಮತ್ತು ದೊಡ್ಡದು ಎಂದು ಎರಡು ಪ್ರಕಾರದವಿರುತ್ತವೆ. ಇದರ ಫಲಕೆಗಳು (Blades) ಸುದೃಢವಾಗಿರುತ್ತವೆ. ಮುಖ ಅಥವಾ ಅಗ್ರ ಭಾಗವು ಸಂಣದಿರುತ್ತದೆ. ಮತ್ತು ಒಳಗಡೆಗೆ ರೇಖಾಗಳು (Serrations) ಇರುತ್ತವೆ. ಈ ಯಂತ್ರಗಳ ಪ್ರಯೋಗವು ಶಸ್ತ್ರಕರ್ಮ [Operation] ಮಾಡುವ ಸಮಯದಲ್ಲಿ ಕತ್ತರಿಸಿದ ಧಮನೀಗಳ ಮತ್ತು ಶಿರಾಗಳ ತುದಿಯನ್ನು ಹಿಡಿದು ರಕ್ತಸ್ರಾವವನ್ನು ನಿಲ್ಲಿಸುವದಕ್ಕೋಸುಗ ಬರುತ್ತದೆ. ತದನಂತರ ಅವುಗಳನ್ನು ದಾರದಿಂದ ಕಟ್ಟುವದು ಹಗುರವಾಗುತ್ತದೆ. ಇದರ ಪ್ರಯೋಗದಲ್ಲಿ [ವಾರಂಗ] ಳ] ಹೀಗೆ ಗ್ರಹ [Catch] ಆಗುತ್ತದೆ. [ಿ] ಅದರಿಂದ ಪರಸ್ಪರ ಎರಡೂ ಫಲಕೆಗಳು ಜೋಡಿಸಲ್ಪಡುತ್ತವೆ. [ಸಿಗಿಬೀಳುತ್ತವೆ] ಪುನಃ ಅದನ್ನು ಕೈಯಿಂದ ಹಿಡಿದಿರುವ ಅವಶ್ಯಕತೆ ಇರುವದಿಲ್ಲ. ಶಲ್ಯ ವಿಜ್ಞಾನದ ದೃಷ್ಟಿಯಿಂದ ಈ ಯಂತ್ರವು ಬಹಳ ಉಪಯೋಗೀ ಇರುತ್ತದೆ. ಇದರ ನಾನಾ ವಿಧವಾದ ಉಪಯೋಗವು ಕರ್ಮಾಭ್ಯಾಸ [ಸ್ವಾನುಭವ] ದಿಂದ ವಿದಿತವಾಗುತ್ತದೆ. ಇನ್ನೂ ಬೇರೆ ಎರಡು ಸ್ವಸ್ತಿಕ ಯಂತ್ರಗಳನ್ನು ಕೆಳಗೆ ಕೊಡಲಾಗಿದೆ:—

ಕ] Bullet Forceps [ಕ್ರೌಂಚ ಮುಖ]. ಬಂದೂಕದ ಗುಂಡನ್ನು [Bullet] ತೆಗೆಯುವದರ ಸಲುವಾಗಿ ಇದರ ಉಪಯೋಗವಾಗುತ್ತದೆ. ಇದರ ಮುಖವು ಅಥವಾ ದವಡೆ [Jaw] ಸಲ್ಪ ಕತ್ತರಿಸಿದಂತಿರುತ್ತದೆ. ಇದರಿಂದ ಗುಂಡು ಚನ್ನಾಗಿ ಸಿಕ್ಕಿಕೊಳ್ಳುತ್ತದೆ. ಇದರ ಎರಡನೇ ಹೆಸರು Stevenson's Forceps[Extractor]ಇರುತ್ತದೆ.

## ಕ್ರೌಂಚ ಮುಖಯಂತ್ರ

Bullet Forceps. ಇದು ಲಂಡನದ War office [ಯುದ್ಧಕಾರ್ಯಾಲಯ] ದ ನಮೂನೆಯಂತೆ ಇರುತ್ತದೆ. ಇದರ ಒಂದು ರೂಪಾಂತರವು American Bullet Forceps ದಂತೆ ಇರುತ್ತದೆ.

ಇದರ ದವಡೆಯು ಚಮಚೆ[Spoon or Scoop–ದರ್ವ್ಯಾಕಾರ]ಇರುತ್ತವೆ. ಅವುಗಳಲ್ಲಿಯೂ ಗುಂಡು ಸುಗಮವಾಗಿ ಸಿಗಲ್ಪಡುತ್ತದೆ.

ಬ]Lithotomy Forceps, Little's [ಲಿಟಲ್ಸಮಹಾ: ಕುರರಮುಖ ಅಥವಾ ಅಶ್ಮರೀ ನಿಷ್ಕಾಸಕ ಯಂತ್ರ] ಇದರ ದವಡೆ ಚಮಚೆ [Spoon] ಯಂತೆ ಇರುತ್ತವೆ. ಒಳಗಡೆ ಹುರುಬರಕವಿದೆ. ಮೂತ್ರಾಶಯದಿಂದ ಹರಳುಗಳನ್ನು [Stone] ತೆಗೆಯುವ ಕೆಲಸ ಬರುತ್ತದೆ.

## ಅಶ್ಮರೀ ನಿಷ್ಕಾಸಕಯಂತ್ರ [ಕುರರ ಮುಖ]

ಈ ಯಂತ್ರವು ೭ ಮತ್ತು ೯ ಇಂಚು ಉದ್ದವಾಗಿ ಎರಡು ಪ್ರಕಾರವಿರುತ್ತವೆ.

ಇತ್ತೀಚೆಗೆ ಅನೇಕ ಪ್ರಕಾರದ ಸ್ವಸ್ತಿಕ ಯಂತ್ರಗಳು (Forceps) ಭಿನ್ನ ಭಿನ್ನವಾದ ಪ್ರಯೋಜನೆಯ ಸಲುವಾಗಿ ಸಿದ್ಧಮಾಡಿದವು ಸಿಗುತ್ತವೆ. ಅವು ಯಾವದಾದರೊಂದು ದೊಡ್ಡ ಋಗ್ಣಾಲಯದಲ್ಲಿ ನೋಡಲಿಕ್ಕೆ ಸಿಗುತ್ತವೆ. ಉದಾಹರಣಾರ್ಥವಾಗಿ— Skull Forceps [ಕಪಾಲಾರ್ಥ] Uterine Forceps [ಗರ್ಭಾಶಯಾರ್ಥ], Goitre Forceps [ಗಲಗಂಡಾರ್ಥ], ಇತ್ಯಾದಿ

ಯಂತ್ರಗಳ ಉದ್ದಳತೆಯು (Length of Instruments) ನಮ್ಮ ಶಾಸ್ತ್ರಕಾರರು ಉದ್ದಳತೆಯನ್ನು ಬಹುಶಃ ಅಂಗಲು (Digits) ಗಳಲ್ಲಿ ಬರೆದಿದ್ದಾರೆ. ಉದಾ:— 'ಸ್ವಸ್ತಿಕ ಯಂತ್ರಾಣಿ ಅಷ್ಟಾದಶಾಂಗುಲ ಪ್ರಮಾಣಾನಿ, ಸಂದಂಶೌ ಷೋಡಶಾಂಗುಲೌ' ಇತ್ಯಾದಿ. ಮೂರು ಅಂಗುಲಿ [ಬೆರಳು]ಗಳ ಪ್ರಾಯಃ ಎರಡು ಇಂಚುಗಳ ಸದೃಶವೆಂದು ಅಥವಾ ಒಂದು ಅಂಗುಲವು ¾ ಇಂಚಿನ ಸಮಾನವಾಗಿದೆ ಸ್ವಸ್ತಿಕ ಯಂತ್ರಗಳು ೧೮ ಅಂಗುಲಗಳಿರುವವೋ ? ೧೮ × ¾ = ೧೩" ಅಥವಾ [೧] ಫೂಟು ಎಂದು ತಿಳಿಯತಕ್ಕದ್ದು. ಕೆಲವರು "Big instruments hold well" ಅರ್ಥಾತ್ ದೊಡ್ಡ ಆಯುಧಗಳು ಚನ್ನಾಗಿ ಹಿಡಿಯಲ್ಪಡುತ್ತ

ಎಂದು ಅನ್ನುತ್ತಾರೆ. ಪ್ರಾಚೀನ ಕಾಲದಲ್ಲಿ ಬಾಣಗಳನ್ನು ತೆಗೆಯುವದರ ಶೆಯಿಂದ ಉದ್ಧವಾದ ಸ್ವಸ್ತಿಕ ಯಂತ್ರಗಳ ಅವಶ್ಯಕತೆಯು ಬೀಳುತ್ತಿತ್ತು.

# ಸಂದಂಶನ ಯಂತ್ರಗಳು

## Tongs or Pincers

"ಸನಿಗ್ರಹೋಽನಿಗ್ರಹಶ್ಚ ಸಂದಂಶೌ ಷೋಡಶಾಂಗುಲೌ ಭವತಃ; ತ್ವಙ್ಮಾಂಸ ಸಿರಾಸ್ನಾಯುಗತಶಲ್ಯೋದ್ಧರಣಾರ್ಥಮುಪದಿಶ್ಯೇತೇ ॥೧೧॥

[ಸು. ಸೂ. ಅ. ೭]

ಸಂದಂಶಯಂತ್ರಗಳು ಸನಿಗ್ರಹ [ ನಿಗ್ರಹದಿಂದಸಹಿತ ] ಮತ್ತು ಅನಿಗ್ರಹ [ನಿಗ್ರಹರಹಿತ ಅಥವಾ ನಿಗ್ರಹಹೀನ] ಗಳೆಂದು ಹೀಗೆ ಎರಡು ಪ್ರಕಾರದವು ೧೬ ಅಂಗುಲ ಉದ್ದವಾದವು ಇರುತ್ತವೆ. ತ್ವಚೆ, ಮಾಂಸ, ಸಿರಾ, ಮತ್ತು ಸ್ನಾಯುಗಳಲ್ಲಿ ಸಿಗಿಬಿದ್ದ ಶಲ್ಯಗಳ ನಿಷ್ಕಾಸನಾರ್ಥವಾಗಿ ಉಪಯೋಗಕರವಿರುತ್ತವೆ.

ವಕ್ತವ್ಯ— "ಸಮ್ಯಗ್ ದಶ್ಯತೇಽನೇನ ನೇತಿ ಸಂದಂಶಃ" ಅರ್ಥಾತ್ ಯಾವು ಚನ್ನಾಗಿ ಕಚ್ಚುತ್ತಿವಿಯೋ [ ಸರ್ಪ, ಇರಿವೆಗಳಂತೆ ಹಲ್ಲಿನಿಂದ] ಅಥವಾ ಹಿಡಿದುಕೊಳ್ಳುತ್ತಿವೆಯೋ ಅವುಗಳಿಗೆ 'ಸಂದಂಶ'ಯಂತ್ರಗಳೆನ್ನುವರು. ಸನ್ನೀ ವಾ ಸಂಡಾಸೀ. [ಇಕ್ಕಳ ಅಥವಾ ಮನಗಾವು] ಅವು [ಅಕ್ಕಸಾಲಿಗರು] ಕಮ್ಮಾರರಹತ್ತರ ಇರುತ್ತಿವೆಯೋ ಅದು ಸಂದಂಶ ಅಥವಾ 'ಸಂದಶನೀ'ಯ ಉಪಭ್ರಂಶ ವಿರುತ್ತದೆ. ಇದರ ಎರಡು ಫಲಕಗಳು [Blades] ಇರುತ್ತವೆ. ಅದರಲ್ಲಿ ಸ್ವಸ್ತಿಕ ಯಂತ್ರದಂತೆ ಕೀಲವಿರುತ್ತದೆ. ಮುಖ ಸೂಕ್ಷ್ಮ ಮತ್ತು ಹಸ್ತಗ್ರಹ ದೃಢ ಮತ್ತು ವಕ್ರವಿರುತ್ತದೆ. ಇದರ ಸಂಬಂಧವಾಗಿ ಡಲ್ಹಣನು ಅನ್ಯಟೀಕಾಕಾರರಮತವನ್ನು ಹೀಗೆಬರೆದಿದ್ದಾನೆ. 'ಅನ್ಯೇತು ಸನಿಗ್ರಹಃ ಲೋಹಕಾರ ಸಂದಂಶ ಇವ ಕೀಲಬದ್ಧ ಇತಿ ಮನ್ಯಂತೇ. ನಮಗಂತೂ ಸನಿಗ್ರಹ ಸಂದಂಶ ಯಂತ್ರದ ಈ ಅರ್ಥವು ಒಳ್ಳೇದೆಂದು ಪ್ರತೀತವಾಗುತ್ತದೆ.

ಸಂದಂಶದ ಮತ್ತೊಂದು ಭೇದವು "ಅನಿಗ್ರಹ" ಕೀಲವಿಲ್ಲದ್ದು (Without a catch) ಇರುತ್ತದೆ. ಇತ್ತೀಚೆಗೆ — Dressing

Forceps (ವ್ರಣೋಪಯೋಗೀ ಚಿಮುಟಿಗೆ)or Dissecting For[illegible] (ಶವಚ್ಛೇದನ ಸಹಾಯಕ ಚಿಮುಟಿಗೆ)ಎಂದು ಹೇಳಲ್ಪಡುತ್ತದೆ. [illegible] ಕೀಲವು ಇರುವದಿಲ್ಲ. ಇದರ ಫಲಕೆಗಳು ಒಂದು ಸಿರೆಯ ಮೇಲೆ [illegible] ಸಲ್ಪಟ್ಟಿರುತ್ತವೆ. ಒಳಗಡೆಗೆ ಒಂದು ಬಂಧನ (Spring) ಇರು[illegible] ಅದನ್ನು ಒತ್ತುವದರಿಂದ ಚಿಮುಟಿಗೆಯ ಎರಡನೇ ಸೂಕ್ಷ್ಮಾಗ್ರ [illegible] ಸಿರೆಯು ಮುಚ್ಚಲ್ಪಟ್ಟು ಪದಾರ್ಥ (ಶಲ್ಯಾದಿ)ವನ್ನು ಹಿಡಿದು ಕೊಳ್ಳು[illegible]ಲ್ಲಿಲ್ಲ. ಈ 'ಸವಿಬಂಧನ ಸಂದಂಶ'ವನ್ನು ಈಗಿನ ಕಾಲದಲ್ಲಿ Spring Dress[illegible] Forceps * ಅನ್ನುತ್ತಾರೆ. ಮತ್ತು ಇವು ಈಗ ಸಣ್ಣವು ದೊಡ್ಡವು [illegible] ಎಷ್ಟೋ ಪ್ರಕಾರಡವು ಸಿಗುತ್ತವೆ. ಕೆಲವು ಚಿಮ್ಮಟಿಗಳು Spring[illegible] (ಅನಿಬಂಧನ) ಇರುತ್ತವೆ. ಇವುಗಳಲ್ಲಿ ಕೆಲವುಗಳ ಮುಖವು ಬಿ[illegible] ಮತ್ತು ಅಗಲವಾಗಿರುತ್ತದೆ. ಮತ್ತು ಕೆಲವುಗಳ ಮುಖವು ಸೂಕ್ಷ್ಮವವನ್ನು ಚೂಪುಳ್ಳದ್ದು (Pointed) ಅಥವಾ ಸದಂತುರ (Toothed) ವಿರುತ್ತ[illegible] ಸಾಧಾರಣ ಸಂದಂಶನೀ (Dressing Forceps) ಯ ಆಕಾರವು [illegible] ಯಂತೆ ಇರುತ್ತದೆ.

ಇದು ಬಹಳ ಉಪಕಾರಿಯಂತ್ರವಿದೆ. ಡಲ್ಹಣನು ಇದರ ವಿಷ[illegible] ದಲ್ಲಿ ಹೀಗೆ ಬರೆದಿದ್ದಾನೆ:— "ಅನ್ಯಶ್ಚಾನಿಗ್ರಹಃ ಅನಿಭಂದನಃ ಸ್ವರ್ಣಕಾ[illegible] ಯಸ್ಯೇವ" ಎರಡನೇ ಬಂಧನ (ಕೀಲ) ರಹಿತ ಅಕ್ಕಸಾಲಿಗರ ಚಿಮ್ಮ[illegible] ದಂತಿದೆ. ಅನಿಗ್ರಹ ಸಂದಂಶದ ಸಂಬಂಧದಲ್ಲಿ ಕೆಲವು ಮತ ಭೇದಗಳ[illegible] ಡಲ್ಹಣನು ಅದಕ್ಕೆ "ಏಕಃ ಸನಿಗ್ರಹಃ ಸವಾರಂಗೋ ನಾಪಿತಸ್ಯೇವ" [illegible]

(೧) ವಾಗ್ಭಟಕಾರರ ಸಂದಂಶ ಸಂಬಂಧಿಯಾದ ವಚನವನ್ನು ನೋಡಿರಿ:— "ಕೀಲಬದ್ಧ ವಿಮುಕ್ತಾಗ್ರೌ ಸಂದಂಶೌ ಷೋಡಶಾಂಗುಲೌ ತ್ವಕ್ ಶಿರಾ ಸ್ನಾಯುಪಿಶಿತಲಗ್ನ ಶಲ್ಯಾಪಕರ್ಷಣೌ ||೮||

(ಅ. ಹೃ. ಸೂ. ಅ. ೨೫)

ಸಂದಂಶ ಯಂತ್ರಗಳು ಎರಡು ಪ್ರಕಾರ:— (೧) ಕೀಲಬದ್ಧ— ಕೀಲದಿಂದ ಜೋಡಿಸಲ್ಪಟ್ಟವು; (೨) ಮುಕ್ತಾಗ್ರ—ಇದರ ಹಿಂದಿನ ಶಿರೆಯು ಬಿಡಿಯಾಗಿರುತ್ತದೆ. ಇವುಗಳ ಉದ್ದಳತೆಯು ೧೬ ಅಂಗುಲ ಮತ್ತು ಕಾರ್ಯವ ತ್ವಕ್, ಸಿರಾ, ಸ್ನಾಯು ಮತ್ತು ಮಾಂಸಗತ ಶಲ್ಯಗಳನ್ನು ಉದ್ಧರಣ ಮಾಡುವದಿದೆ. ಇಲ್ಲಿ ಕೀಲಬದ್ಧ ಸಂದಂಶದ ಅಭಿಪ್ರಾಯವು ಸಂದಂಶನೀ

ತ್ತವೆ.
ಮತ್ತು
(ಸನ್ನೀ)
( Dre
ಕಿಂತಲ
ಇರುತ್ತ
ಗಂಭೀ
ವಾದದ
(ಗ್ರಹ
Ring

ರೆದಿದ್ದಾನೆ. ಅರ್ಥಾತ್ ಯಾವದರ ಮೇಲೆ ವಾರಂಗ (ಚಕ್ರವಲಯ Ring)ವು ಇರುತ್ತದೋ ಹೇಗೆ ನಾವಲಿಗನ(Barber)ದು ಇರುತ್ತದೋ ಅದು ಸನಿಗ್ರಹ ಸಂದಂಶವಿದೆ. ಇದಕ್ಕೆ ವಾಗ್ಭಟರು ಮುಚುಂಡೀ (ಬಿಡು ಕಡಿ) ಎಂದು ಬರೆದಿದ್ದಾರೆ

ಇಲ್ಲಿ ನಿಗ್ರಹದ ಭಾವವು ಉಂಗುರ (ವಲಯ)ದಲ್ಲಿದೆ. ಆದರೆ ಕೀಲ ಲ್ಲಿಲ್ಲ. ಆದರೆ ಅನಿಗ್ರಹ ಸಂದಂಶವು ಸಾಧಾರಣವಾದ ಚಿಮುಟಿಗೆ ಅಥವಾ ಚಿಮ್ಮಟ (Fire tongs) ವಿರಬಹುದು. ಕೆಲವುಸಾರೆ ಎರಡೂ ಚಿಮ್ಮಟಗಳ ಮೇಲೆಯೂ ಚಕ್ರವು ಇರುತ್ತದೆ. ವಸ್ತುತಃ ಸಂದಂಶ ಯಂತ್ರಗಳು ೩ ಪ್ರಕಾರದವಾದವು. (೧) ಸನ್ನೀ (೨)ಚಿಮುಟೀ (೩) ಮುಚುಂಡಿ‡ ಸುಶ್ರುತ ಕಾರರಿಗೆ ಇವುಗಳಲ್ಲಿ ಯಾವ ಎರಡು ಯಂತ್ರಗಳು ಸಮ್ಮತ ಇವೆ ಎಂಬು ವದನ್ನು ಹೇಳುವದು ಕಠಿಣವಾಗಿದೆ. ಒಂದು ವೇಳೆ ನಿಗ್ರಹದ ಅರ್ಥವು ಕೀಲವೆಂದಾದರೆ ಕ್ರಮಾಂಕ ೧ ಮತ್ತು ೨ ಇರುತ್ತವೆ. ಒಂದು ವೇಳೆ ನಿಗ್ರಹದ ಅರ್ಥವು ಉಂಗುರವೆಂದು ಆದರೆ ಕ್ರಮಾಂಕ ೨ ಮತ್ತು ೩ ಇರು ತ್ತವೆ. ಡಲ್ಹಣನೂ ಸಹ ಇವು ಮೂರೂ ಯಂತ್ರಗಳನ್ನು ಬರೆದಿದ್ದಾನೆ. ಮತ್ತು ವಾಗ್ಭಟಕಾರರೂ ಸಹ§ ೩ ಅಥವಾ ೪ ಎಂದು ಬರೆದಿದ್ದಾರೆ.

---

(ಸನ್ನೀ) ಇರುತ್ತದೆ. ಮುಕ್ತಾಗ್ರ ಸಂದಂಶದಿಂದ ಚಿಮುಟಿಗೆಯ (Dressing Forceps) ಲ್ಲಿಯೇ ಅಭಿಪ್ರೇತವಾಗಿದೆ. ಸಂಸ್ಕೃತನ ಕಿಂತಲೂ ವಾಗ್ಭಟಕಾರರ ವಚನಗಳು ಹೆಚ್ಚು ಸ್ಪಷ್ಟವಾಗಿವೆ.

* ಚಿಮ್ಮಟಗಳು (Pincers) ಸ್ಪ್ರಿಂಗ ಇಲ್ಲದೆ(Springless)ಯೂ ಇರುತ್ತವೆ, ಆಗ್ಗೆ ಅವಕ್ಕೆ ಕೇವಲ Dressing Forceps ಅನ್ನುತ್ತಾರೆ.

‡ "ಮುಚುಂಡೀ ಸೂಕ್ಷ್ಮದಂತರ್ಜುಮೂರ್ಲೇ ರುಚಕ ಭೂಷಣಾ।
ಗಂಭೀರ ವ್ರಣಮಾಂಸಾನಾಮಮುರ್ಣಃ ಶೇಷಿತಸ್ಯಚ ॥೮॥

(ಅ. ಹೃ. ಸೂ. ಅ. ೨೫)

ಮುಚುಂಡಿಯು (ಮೋಚನಾ) ಸಂಣ ಹಲ್ಲುಗಳಿಂದ (ಇ) ಯುಕ್ತ ವಾದದ್ದು ಮತ್ತು ಋಜು (ಸರಳ ವಕ್ರವಿಲ್ಲದ್ದು) ಇರುತ್ತದೆ; ಮೂಲ (ಗ್ರಹಸ್ಥಾನ) ವು ಒಂದು ದುಂಡಗಿನ (ಚಕ್ರ ವಲಯ ಅಥವಾ ಉಂಗುರ Ring) ಉಂಗುರದಿಂದ ಭೂಷಿತವಾಗಿರುತ್ತದೆ. ಗಂಭೀರವ್ರಣ Deep

ಕಾರ್ಯ:— ಚಿಮುಟಿಯು ( Dressing Forceps ) ಕ್ರಿಯಾರ್ಥವಾಗಿ ಬಹಳ ಉಪಯೋಗೀ ಯಂತ್ರವಿದೆ. ಇದು Tis ಅರ್ಥಾತ್ ತ್ವಚಾ, ಮಾಂಸ, ಸಿರಾ, ಧಮನೀ, ಸ್ನಾಯು ಇತ್ಯಾದಿ ಸೂಕ್ಷ್ಮ ಮತ್ತು ಬಾಹ್ಯಶಲ್ಯ (Superficial foreign bod ಕೀಲ, ಕಂಟಕ ಮೊದಲಾದ ಮತ್ತು ವ್ರಣಗಳ ಮಾಂಸ, ತ್ವಕ್, ಮೊದಲಾದವುಗಳ ಶೋಧನ ಮತ್ತು ಆಹರಣ ಮೊದಲಾದವು ಪ್ರಯುಕ್ತವಾಗಿರುತ್ತದೆ. ಈಗ ಇವು ಸಣವು ದೊಡ್ಡವೆಂದು ಎ ಪ್ರಕಾರದವು ದೊರೆಯುತ್ತವೆ. ಬಹುಶಃ ೪-೫ ಇಂಚು ಉದ್ದವಿರು ಕೆಲವುಗಳ ಮುಖವು ಸ್ಥೂಲ ಮತ್ತು ಅಗಲವಿರುತ್ತದೆ. ಮತ್ತು ಕೆ ಗಳ ಮುಖವು ಚೂಪುಳ್ಳದ್ದಿರುತ್ತದೆ. ಸಂಕ್ಷಿಪ್ತ ಕೆಲಸವು ಆಂಗ್ಲಭಾಷೆ ಹೀಗಿದೆ:—

Ordinary dissecting forceps; — Someti toothed at the tip to have an efficient holding the tissues." ಮುಚುಂಡಿಯು ಪ್ರಾಯಃ ನಾಸಾಗತರೋಮ(ಕೂದ ಗಳ ಆಹರಣಾರ್ಥವಾಗಿ ಮತ್ತು ವಾಗ್ಭಟೋಕ್ತ ೪ನೇ ಸಂದಂಶ ಪಕ್ಷ್ಮ (eye-lashes; cilia ಘಲಕೆಗಳ) ಗಳನ್ನು ಕಿತ್ತುವದರ ವಾಗಿ ವ್ಯವಹರಿಸಲ್ಪಡುತ್ತವೆ.

---

abscess or Sinus) ಗತ ಮಾಂಸಾದಿ ಮತ್ತು ಭಿನ್ನ ಅರ್ಮ (ಕ ಲ್ಲಿಯ ರೋಗ) (Pterygium) ದ ಅವಶಿಷ್ಟ ಭಾಗವನ್ನು ಅ ಮಾಡುವ ಕೆಲಸದಲ್ಲಿ ಬೀಳುತ್ತದೆ. ಹೀಗೆ ಮುಚುಂಡಿಯು ವಾಗ್ ಅನುಸಾರವಾಗಿ ೩ನೇ ಸಂದಂಶ ಯಂತ್ರವಿದೆ.

§ ವಾಗ್ಭಟನು ೬ ಅಂಗುಲ ಒಂದು ಸಣ ಸಂದಂಶದ ವ ಮಾಡಿದ್ದಾನೆ. "ಷಡಂಗುಲೋಽನ್ಯೋ ಹರಣೇ ಸೂಕ್ಷ್ಮಶಲ್ಯೋ ಕ್ಷ್ಮಣಾಂ" ೬ ಅಂಗುಲ ಒಂದು ಸಂದಂಶವಿದೆ. ಸೂಕ್ಷ್ಮಶಲ್ಯ ಅ ಪಕ್ಷ್ಮಕೋಪ (Trichiasis)ದಲ್ಲಿ ಉಪಪಕ್ಷ್ಮ (ಘಲಕೆಗಳ eyelash ಗಳನ್ನು ತೆಗೆಯುವದರ ಸಲುವಾಗಿ ಬರುತ್ತದೆ. ಇದು ಈಗಿನ ಕಾಲ Epilation or Cilia Forceps ಎನ್ನಿಸಿಕೊಳ್ಳುತ್ತದೆ.

ಉದ್ದಳತೆ:— ಷೋಡಶಾಂಗುಲ (೧೬ ಅಂಗುಲ = ಸುಮಾರು ೧೧ ಇಂಚು) ಉದ್ದಳತೆಯು ಹೆಚ್ಚಾಗಿದೆಯೆಂದು ಪ್ರತೀತವಾಗುತ್ತದೆ. ೮-೧೦ ಅಂಗುಲ ಪರ್ಯಾಪ್ತವಿದೆ ಅಥವಾ ೬ ಅಂಗುಲ (ವಾಗ್ಭಟದ ಅನುಸಾರವಾಗಿ ಳನೇ ಸಂದಂಶದಂತೆ) ಇರುತ್ತದೆ (ಸಾಕಾಗುತ್ತದೆ). ಕಮ್ಮಾರರ ಪನ್ನಿಯು ೧೬ ಅಂಗುಲವಿರುತ್ತದೆ ಅಥವಾ ಇದಕ್ಕೂ ಹೆಚ್ಚು ಇರುತ್ತದೆ. ಇದು ಸ್ಥೂಲವಾದ ಶಲ್ಯಗಳನ್ನು ಹಿಡಿಯುವ ಕೆಲಸದಲ್ಲಿ ಬರುತ್ತದೆ.

## ತಾಲಯಂತ್ರಗಳು (Scoops)

ತಾಲಯಂತ್ರೇ ದ್ವಾದಶಾಂಗುಲೇ ಮತ್ಸ್ಯತಾಲ† ವದೇಕ ತಾಲದ್ವಿತಾಲಕೇ; ಕರ್ಣನಾಸಾನಾಡೀಶಲ್ಯಾನಾಮಾಹರಣಾರ್ಥಂ * ||೧೨||

ಸು. ಸೂ. ಅ. ೭

ತಾಲಯಂತ್ರಗಳು ೧೨ ಅಂಗುಲ ಉದ್ದ, ಮತ್ಸ್ಯತಾಲ ಅಥವಾ ಅಂಗಳದಂತೆ (ಒಳಗಡೆ ತಗ್ಗುವುಳ್ಳವು) ಒಂದು ತಾಲ (Single scoops) ಮತ್ತು ಎರಡು ತಾಲ (Double Scoops) ವೆಂದು ಎರಡು ಪ್ರಕಾರದವಿರುತ್ತವೆ. ಇವುಗಳ ಕೆಲಸವು ಕರ್ಣ, ನಾಸಾ, ನಾಡೀ ವ್ರಣಾದಿಗಳ ಒಳಗಿದ್ದ ಶಲ್ಯಗಳನ್ನು ಆಹರಣ ಮಾಡುವದಿದೆ.

---

ಇದರ ಅಗಲವಾದ (ಹಲಚೆಯಾದ) ಮುಖವನ್ನು ನೋಡಿರಿ. ಇದು ಸಂದಂಶಯಂತ್ರದ ಳನೇ ಪ್ರಕಾರವಿರುತ್ತದೆ. ಇದರ ವರ್ಣನೆಯು ಸುಶ್ರುತದಲ್ಲಿ ಇಲ್ಲ. ಇದನ್ನು ಸಹ ಚಿಮ್ಮಟಿಯು ಅಂತರ್ಗತವೆಂದೇ ತಿಳಿಯತಕ್ಕದ್ದು.

† ಮತ್ಸ್ಯತಾಲುವದಿತಿ ಪಾಠಾಂತರವ್ |

* ದ್ವೇ ದಾದಶಾಂಗುಲೆ ಮತ್ಸ್ಯತಾಲವದ್ ದ್ವ್ಯೇಕತಾಲಕೇ| ತಾಲಯಂತ್ರೇ ಸ್ಮೃತೇ ಕರ್ಣನಾಡೀಶಲ್ಯಾಪಹಾರಿಣೀ ||೧೦||

ಅ. ಹೃ. ಸೂ. ಅ. ೨೫

ವಾಗ್ಭಟದ ಈ ವಚನವು ಸುಶ್ರುತದ ತುಲ್ಯವೇ ಇದೆ. ಅರ್ಥವನ್ನೂ ಆದರಂತೆಯೇ ತಿಳಿಯತಕ್ಕದ್ದು.

ವಕ್ತವ್ಯ:— ಮತ್ಸ್ಯತಾಲದ ಅರ್ಥವನ್ನು ಡಲ್ಹಣನು ಹೀಗೆ ಹೇಳಿದ್ದಾನೆ. :— "ತಾಲಮತ್ರ ಶಕಲಮೂಹುಃ, ಮತ್ಸ್ಯಸ್ಯಮೀನಸ್ಯ ತುಲ್ಯೈಪ್ರತನುಮುಖೆ ಇತ್ಯರ್ಥಃ। "

ಮತ್ಸ್ಯತಾಲವು ಮೀನದ ಬಿಳಿಯ ತೆಳ್ಳಗಿನ ಸಿಪ್ಪೆಯಾಗಿದ್ದು ಯಾವದನ್ನು ಮೀನಾಹಾರಿಗಳು ಚೂರಿ ಮೊದಲಾದವುಗಳಿಂದ ಮೊದಲು ಬೇರೆ ಮಾಡಿಕೊಳ್ಳುತ್ತಾರೋ ಅದಕ್ಕೇ ಡಲ್ಹಣನು ಮತ್ಸ್ಯಶಕಲ (ಖಂಡ) ಎಂದಿದ್ದಾನೆ. ಒಂದು ವೇಳೆ ಮತ್ಸ್ಯತಾಲು (ಪಾಠಾಂತರ) ಎಂದು ಓದಿದರೆ ಅರುಣದತ್ತನ ಅನುಸಾರವಾಗಿ "ಮತ್ಸ್ಯಗಲತಾಲು" (Palate bone of the fish — ಮೀನದ ತಾಲು) ಎಂದು ಅರ್ಥವಾದೀತು! ಇದು ಒಳಗಿನಿಂದ ಸ್ವಲ್ಪ ತೆಗ್ಗುಳ್ಳದ್ದು (Hollowed in the middle) ಎಂದು ಆಗುತ್ತದೆ. ಆದ್ದರಿಂದ ತಾಲಯಂತ್ರದ ತಾಲುಗಳು ಸಹ ಸ್ವಲ್ಪ ತಗ್ಗು ಇರಬೇಕಾಗುತ್ತದೆ. ಹಲಚಿಯಾದ ತಾಲದಿಂದ ಶಲ್ಯಾಹರಣವು ಸಂಭವಿಸುವದಿಲ್ಲ. ಇಂಥ ತಗ್ಗಾದ ತಾಲಗಳಿಗೆ ಆಂಗ್ಲಭಾಷೆಯಲ್ಲಿ (Scoop) [ಸ್ಕೂಪ] ಎನ್ನುತ್ತಾರೆ. ತಾಲಯಂತ್ರಗಳು ಸಹ ಎರಡು ಪ್ರಕಾರದವಿವೆ. (೧) ಏಕತಾಲ (Single Scoop) ಮತ್ತು (೨) ದ್ವಿತಾಲ (Double Scoop) ವರ್ತಮಾನ ಶಲ್ಯ ಸಂಭಾರದಲ್ಲಿ ಇವು ಎರಡೂ ಸಿಗುತ್ತವೆ. ಮತ್ತು ಪ್ರಯೋಜನೆಯೂ ಸಹ ಸುಶ್ರುತಾನುಸಾರ ಕರ್ಣ ನಾಸಾದಿಗತ ಶಲ್ಯ (ಕೀವು ಮೊದಲಾದ) ವನ್ನು ಅಪಕರ್ಷಣ ಮಾಡುತ್ತಿವೆ. ಕರ್ಣ ಶಲ್ಯಾಪಕರಣಾರ್ಥವಾಗಿ (ಕರ್ಣತಾಲ ಯಂತ್ರ) [Auralor Ear Scoop] ಇರುತ್ತದೆ. ಇದೇ ರೀತಿಯಾಗಿ ಮೂಗಿನ ದಶೆಯಿಂದ Nasal Scoop§ ನಾಸಾತಾಲ ಯಂತ್ರ, ನಾಡೀವ್ರಣ ಅಥವಾ ಯಾವದಾದರೂ ನಳಿಕೆಯ ಒಳಗಡೆಯ ಶುದ್ಧಿಯ ದೆಶೆಯಿಂದ (Sinus Scoop) ನಾಡೀ ತಾಲಯಂತ್ರ ಇತ್ಯಾದಿಗಳ ವ್ಯವಹಾರವಾಗುತ್ತದೆ.

"ಪರಿಣಾಹಸ್ತು ಕರ್ಣಾದಿ ಪ್ರವೇಶೀಜ್ಞೇಯಃ" (ಡಲ್ಹಣ) ತಾಲದ ಅಗಲವು ಕರ್ಣನಾಸಾದಿಗಳ ಅಗಲದ ಅನುಸಾರವಾಗಿರತಕ್ಕದ್ದು.

§ Nasal ಶಬ್ದವು ನಾಸಾದಿಂದಲೇ ಹುಟ್ಟಿರುತ್ತದೆ.

ಏಕತಾಲ ದ್ವಿತಾಲದ ವಿಷಯವಾಗಿ ಡಲ್ಲಣನು ಟೀಕೆಯಲ್ಲಿ ಹೀಗೆ ರೆದಿದ್ದಾನೆ:— "ಅನ್ಯೇತು ಮತ್ಸ್ಯತಾಲವದೇಕತಾಲಕ ದ್ವಿತಾಲಕ ಇತಿ ಶಂತಿ, ವ್ಯಾಖ್ಯಾನಯಂತಿ ಚ ಪತ್ರೊಸ್ಯತ್ರ ಭೇಟುಲಿಮತ್ಸ್ಯಃ, ತಸ್ಯ ೌಹಮಯ ತಾಲಕಾಕಾರಂ ಮುಖಂ ಭವತಿ, ಅತಸ್ತನ್ಮುಖಾರ್ಧಾಕಾರಂ ಂತ್ರಮೇಕತಾಲಕಂ, ಸರ್ವ ಮುಖಾಕಾರಂ ದ್ವಿತಾಲಕಂ, ತಾಲ ೋತ್ರ ಅಪವಾರಕಾದಿ ಕಪಾಟ ಸಂಧಿ ಬಂಧನಂ ಲೌಹಮಯಮುಚ್ಯತೆ' ೇಟುಲ ಎಂಬುದು ಒಂದು ಪ್ರಕಾರದ ಮೀನವಿರುತ್ತದೆ. ಅದರ ಅರ್ಧ ುಖವು ಏಕತಾಲ ಮತ್ತು ಸರ್ವ ಮುಖವು ದ್ವಿತಾಲಕವಿರುತ್ತದೆ. ದ್ವಿ ಾಲದಲ್ಲಿ ಒಂದು ಅಪವಾರಕವಾದ ಬಂಧನವು (ತೆಗೆಯುವ ಉಂಗುರ) ತ್ತಿಕೊಂಡಿರುತ್ತದೆ. ಯಾವಾಗ ಶಲ್ಯವುಮುಖದಲ್ಲಿ ಸಿಕ್ಕಿಕೊಳ್ಳುತ್ತದೋ ಗ್ಗೆ ಬಂಧನವನ್ನು (ಉಂಗುರವನ್ನು) ಒತ್ತಿ ಮುಖವನ್ನು ಮುಚ್ಚಲ್ಪಡು ತ್ತದೆ. ಮತ್ತು ದ್ವಿತಾಲಕವು ಹೊರಗೆ ಎಳೆಯಲ್ಪಡುತ್ತದೆ.

ಒಂದು ವೇಳೆ ದಂಡದ ( rod ) ಎರಡೂ ಸಿರೆಗಳ ಮೇಲೆ ತಾಲ Scoops) ಗಳಿದ್ದರೆ ಅವುಗಳಿಗೂ ದ್ವಿತಾಲಕ (Double Scoop) ಎನ್ನುವದುಂಟು.

ಆಧುನಿಕ ಶಲ್ಯ ವಿಜ್ಞಾನದಲ್ಲಿ ಒಂದು ಪಿತ್ತಾಶ್ಮರೀ ತಾಲಯಂತ್ರ (Gall–Stone Scoop) ವೂ ವ್ಯವಹರಿಸಲ್ಪಡುತ್ತದೆ. ಇದರವರ್ಣನೆ ಯನ್ನು ನೋಡಿರಿ :—

The Spoon is oblong and shallow with a long flexible shaft, mounted on a broad handle. Edges of the Spoon are necessarily blunt, as these are not meant for scraping. These are available in two sizes; the bigger ones for the gall-bladder and smaller for the bile-duct. The breadth of the smaller Scoop is not more than 1/4 th of an inch so as to enable it to be passed in the lumen of the bile—duct.

Uses— (1) To remove the debris or the bi sand from the gall-bladder or the bile-duct.

(%) To manipulate an elusive stone, wh cannot be caught by the forceps.

(3) To dislodge a stone that is fixed in wall of the gall-bladder or the bile-duct" — Guide to Surgical Instruments.

ಸಂಕ್ಷಿಪ್ತ ಭಾವ:— ಪಿತ್ತಾಶ್ಮರೀ ನಿಷ್ಕಾಸಕ ತಾಲದ ಚಮಚ ಸ್ವಲ್ಪ ಉದ್ದ ಗೋಲಾಕಾರ ಮತ್ತು ತಗ್ಗಾಗಿರುತ್ತದೆ. ಇದರ ತು ತೀಕ್ಷ್ಣತೆ ಇರುವದಿಲ್ಲ. ಯಾಕಂದರೆ ಇದು ಕೆತ್ತುವ ಕೆಲಸಕ್ಕೆ ಬರುವದ ಇವು ಎರಡು ಪ್ರಕಾರದವಿರುತ್ತವೆ. ಒಂದು ದೊಡ್ಡದು, ಮತ್ತೊ ಪಿತ್ತಾಶಯದ ದೆಶೆಯಿಂದ ಮತ್ತು ಎರಡನೇದು ಸಂಣದು ಪಿತ್ತ ಪ್ರ ಲಿಯ ದೆಶೆಯಿಂದ ಇರುತ್ತದೆ. ಸಂಣ ತಾಲಕದ ಅಗಲವು ೧/೪ ಇಂಚ ಹೆಚ್ಚು ಇರುವದಿಲ್ಲ ಯಾಕಂದರೆ ಇದಕ್ಕೆ ನಳಿಕೆ ಅಥವಾ ನಾಡೀಯ ಗಿನಿಂದ ಹಾಯ್ದು ಬರಬೇಕಾಗುತ್ತದೆ.

ಪ್ರಯೋಗ:— (೧) ಪಿತ್ತಾಶಯ ಅಥವಾ ಪಿತ್ತ ಪ್ರಣಾಲಿಯ ಬಿಳಿಯ ರೂಪದ ಪಿತ್ತ ಅಥವಾ ಪಿತ್ತದಿಂದ ಹುಟ್ಟಿದ ಮಲವನ್ನು (ಕ ಹೊಲಸು) ಹೊರಗೆ ತೆಗೆಯುವದಿದೆ. (೨) ಪಿತ್ತಾಶ್ಮರೀ ಅಥವಾ ಪ (ಪಾಷಾಣ-ಚೂರು) ಯಾವದು ಸ್ವಸ್ತಿಕ ಯಂತ್ರಗಳಿಂದ ಹಿಡಿಯಲ್ಪಡ ದಿಲ್ಲವೋ ಅದನ್ನು ತಾಲ ಯಂತ್ರದಿಂದ ಸ್ವಾಧೀನದಲ್ಲಿ ತೆಗೆದುಕೊಳ್ ದಿದೆ. (೩) ಪಿತ್ತಾಶಯ ಅಥವಾ ಪಿತ್ತ ಪ್ರಣಾಲೀಯ ಗೋಡೆಗಳಲ್ಲಿ ಪಾಷಾಣವು (ಪಿತ್ತಾಶ್ಮರೀ) ಯನ್ನು ಸ್ಥಾನಚ್ಯುತ ಮಾಡುವದಿದೆ. ಸು ತರ ಸಮಯದಲ್ಲಿಯೂ ತಾಲ ಯಂತ್ರಗಳ ಪ್ರಯೋಗವು ಈ ರೀತಿಯ ಮಾಡಲ್ಪಡುತ್ತಿತ್ತು. ನಾಡೀ‡ (ನಳಿಕೆ) ಶಬ್ದದಿಂದ ಇದೇ ಭಾ

* ಕೆತ್ತುವದರ ದೆಶೆಯಿಂದ ಮಂಡಲಾಗ್ರವು ಕೆಲಸಕ್ಕೆ ಬರುತ್ತ ಆದರ ವರ್ಣನೆಯು ಆಯಾ ಶಸ್ತ್ರಗಳಲ್ಲಿ ಮಾಡಲ್ಪಡುವದು.

‡ ಸುಶ್ರುತೋಕ್ತ ಪಾಠದಲ್ಲಿ "ನಾಡೀ" ಶಬ್ದವನ್ನು ನೋಡಿರಿ.

ರಡುತ್ತದೆ. ಪ್ರಾಚೀನ ಅಥವಾ ಅರ್ವಾಚೀನ ಯಂತ್ರಗಳ ಅಥವಾ ಸ್ತ್ರಗಳ ಪ್ರಕಾರ, ಆಕಾರ, ಆಶಯ, ಪ್ರಯೋಗಾದಿಗಳು ಬಹುಶಃ ಸಮಾವೇ ಇರುತ್ತದೆ. ತಾಲಯಂತ್ರಗಳ ಉದ್ದಳತೆಯು ಸ್ಥಾನಾನುಸಾರವಾಗಿ ಗಿರತಕ್ಕದ್ದೆಂದು ನೆನಪಿನಲ್ಲಿಡತಕ್ಕದ್ದು.

## ನಾಡೀ ಯಂತ್ರಗಳು

ನಾಡೀ ಯಂತ್ರಾಣ್ಯನೇಕ ಪ್ರಕಾರಾಣಿ, ಅನೇಕ ಪ್ರಯೋಜನಾನಿ, ಕತೋಮುಖಾನಿ, ಉಭಯತೋ ಮುಖಾನಿ † ಚ; ತಾನಿ ಸ್ರೋತೋತ ಶಲ್ಯೋದ್ಧರಣಾರ್ಥಂ, ರೋಗದರ್ಶನಾರ್ಥಂ, ಆಚೂಷಣಾರ್ಥಂ, ಯಾಸೌಕರ್ಯಾರ್ಥಂ ಚೇತಿ, ತಾನಿ ಸ್ರೋತೋದ್ವಾರ ಪರಿಣಾಹಾನಿ ಥಾಯೋಗದೀರ್ಘಾಣಿಚ, ತತ್ರಭಗಂದರಾರ್ಶೋ ವ್ರಣವಸ್ತ್ಯುತ್ತರಬಸ್ತಿ ಮೂತ್ರವೃದ್ಧಿದಕೋದರಧೂಮನಿರುದ್ಧಪ್ರಕಶಸನ್ನಿರುದ್ಧಗುದ ಯಂತ್ರಾಣಿ, ಲಾಬುಶೃಂಗ ಯಂತ್ರಾಣಿ ಚೋಪರಿಷ್ಟಾದ್ವಕ್ಷ್ಯಾಮಃ||೧೩|| ಸು. ಸೂ. ಅ. ೭

ನಾಡೀ ಯಂತ್ರವು (ಯಾವದು ಒಳಗಡೆಗೆ ನಳಿಕೆ Tube or Pipe-ಯಂತೆ ಸುಷಿರ ಅಥವಾ ಪೊಳ್ಳು ಇರುತ್ತವೆ. Tubular, ನಾಡೀವನ್ಮಧ್ಯ ಛಿದ್ರಾಣಿ ಇತಿಡಲ್ಹಣಃ) ನಾನಾ ಪ್ರಕಾರ ಮತ್ತು ನಾನಾ ಪ್ರಯೋಜನ ಉಳ್ಳವು ಇರುತ್ತವೆ; ಕೆಲವು ಏಕಮುಖೀ, ಕೆಲವು ಉಭಯಮುಖೀ ( ಎರಡು ಮುಖವುಳ್ಳವು ) ಇರುತ್ತವೆ. ಇವುಗಳ ಕಾರ್ಯವು ಸ್ರೋತಸ್ಸು (ನಳಿಕೆ ಅಥವಾ ಸಚ್ಛಿದ್ರ ಮಾರ್ಗವುಳ್ಳ) ಗಳಲ್ಲಿ ಅವರುದ್ಧವಾದ ಶಲ್ಯಗಳನ್ನು (Foreign bodies) ತೆಗೆಯುವದಿದೆ. ಇವುಗಳ ಅಗಲವು (ವ್ಯಾಸ- Diameter) ಸ್ರೋತೋದ್ವಾರ (ಸ್ರೋತಸ್ಸುಗಳ ಮುಖವು) ದ ಅನುಸಾರವಾಗಿರತಕ್ಕದ್ದು. ಮತ್ತು ಉದ್ದಳತೆಯು (Length) ಸ್ಥಾನಾನುಸಾರವಾಗಿ ನ್ಯೂನಾಧಿಕ (ಹೆಚ್ಚುಕಡಿಮೆ) ಇರತಕ್ಕದು. ಭಗಂದರ (Fistula-in-ano,) ಅರ್ಶ (Piles), ವ್ರಣ (Abscess, Ulcer etc), ಬಸ್ತಿ (Enema), ಉತ್ತರ ಬಸ್ತಿ (Urethral Douche etc) ಮೂತ್ರವೃದ್ಧಿ ( Hydrocele ) ಉದಕೋದರ ( ಜಲೋದರ

† ಒಂದು ವೇಳೆ ಇದರ ಮುಂದೆ "ಬಹುಮುಖಾನಿ ಚ" ಎಂದು ಪಾಠವಿದ್ದರೂ ಸಹ ಉಚಿತವೇ ಇತ್ತು.

Ascites) (ಧೂಮ್ರ Fumigation), ನಿರುದ್ಧ ಪ್ರಕಾಶ Phym
ಸನ್ನಿರುದ್ಧಗುದ ( Stricture of the anus or rectu
ಸಂಬಂಧಿಯ ಯಂತ್ರ, ಅಲಾಬೂ ಯಂತ್ರ ಮತ್ತು ಶೃಂಗಯ
ವರ್ಣನೆಯನ್ನು ಮುಂದೆಮಾಡುತ್ತೇವೆ.

ವಕ್ತವ್ಯ— ನಾಡೀ ಯಂತ್ರವು ಒಳಗಿನಿಂದ ಸುಷಿರ (ರಿಕ್ತ
ಸಚ್ಛಿದ್ರ, ಅಥವಾ ಪೊಳ್ಳು (ತೂತು) ಇರುತ್ತದೆ. ಇದಕ್ಕೆ ಇಂಗ್ರೇಜಿ
Tubular Instruments ಎನ್ನುತ್ತಾರೆ. ಕೆಲವು ಒಂದು
ಮುಚ್ಚಲ್ಪಟ್ಟಿರುತ್ತವೆ. ಮತ್ತೊಂದು ಕಡೆಗೆ ತೆರೆದವಿರುತ್ತವೆ. ಉದಾ
ಅರ್ಶೋ ಯಂತ್ರಗಳು ಅಲಾಬುಯಂತ್ರ ಮೊದಲಾದವು ಮತ್ತು
ಎರಡೂ ಕಡೆಗೆ ತೆರೆದವು (ದ್ವಿಮುಖೀ) ಉದಾ:— ಬಸ್ತಿನೇತ್ರ,
ನೇತ್ರ ಶೃಂಗಾದಿಗಳು. ಇವುಗಳ ಮುಖವು ಸ್ರೋತಸ್ಸಗಳ ವ್ಯಾಸದ
ಸಾರವಾಗಿ ಕೆಲವೆಡೆ ಸಣ್ಣವಿರುತ್ತವೆ. ಮತ್ತು ಕೆಲವುಕಡೆ ದೊಡ್ಡ
ಉದಾ:— ಅರ್ಶೋಯಂತ್ರ, ಭಗಂದರ ಯಂತ್ರ ಅಲಾಬು ಶೃಂಗ
ಲ್ಲಿರುತ್ತವೆ. ಉದ್ದಳತೆಯೂ ಸಹ ಸ್ಥಾನ ಮತ್ತು ಕಾರ್ಯಾನುಸಾ
ಇರುತ್ತದೆ..... ಇವುಗಳ ಪ್ರಯೋಜನವೂ ಅನೇಕವಿರುತ್ತವೆ. ಕೆಲವ
ಶಲ್ಯೋದ್ಧರಣಾರ್ಥವಾಗಿ, ಉದಾ :— ದುಷ್ಟಸ್ತನ್ಯಚೂಷಕ (Bre
pump), ಕಂಠನಾಡೀ ಕಂಠಗತ ಶಲ್ಯೋದ್ಧರಣಾರ್ಥವಾಗಿ ಶೃ
ದುಷ್ಟರಕ್ತಾಚೂಷಣಾರ್ಥವಾಗಿ ಇತ್ಯಾದಿಗಳು, ಕೆಲವು ಯಂತ್ರ
ರೋಗದರ್ಶನಾರ್ಥವಾಗಿ ಪ್ರಯುಕ್ತವಾಗಿರುತ್ತವೆ. ಉದಾ:— ಅ
ಯಂತ್ರ ಕಂಠಶಲ್ಯಾವಲೋಕಿನೀ ನಾಡಿ (Throat speculu
ಇತ್ಯಾದಿ, ಇತ್ತೀಚೆಗೆ ಭಿನ್ನ ಪ್ರಕಾರದ ಅಂಗಗಳ ರೋಗ ನಿದರ್ಶನಾ
ವಾಗಿ ವಿವಿಧ ಯಂತ್ರಗಳ ನಿರ್ಮಾಣತೆಯನ್ನು ಮಾಡಲಾಗಿದೆ. ಉದಾ
ನಾಸಾದರ್ಶನಾರ್ಥವಾಗಿ ನೇಜಲ್ ಸ್ಪೆಕ್ಯುಲಮ Nasal speculu
ಗುದದರ್ಶನಾರ್ಥವಾಗಿ ರೆಕ್ಟಲ್ ಸ್ಪೆಕ್ಯುಲಮ (Rectal speculu
ಕರ್ಣ ದರ್ಶನಾರ್ಥವಾಗಿ ಈಯರ ಸ್ಪೆಕ್ಯುಲಮ Ear or Au
speculum) ಪುಪ್ಪುಸ ಅಥವಾ ಹೃದಯ ಪರೀಕ್ಷಾರ್ಥವಾಗಿ
ಸ್ಕೋಪ (Stethoscope,) ರಕ್ತಾದಿಗತ ಕೃಮಿದರ್ಶನಾರ್ಥ ಸೂ

ೀಕ್ಷಣ ಯಂತ್ರ (Microscope micro- minute, Scope-to see) ಜ್ವರದಲ್ಲಿ ತಾಪ ಮಾಪಕ (Thermometer) ಇತ್ಯಾದಿಗಳು ರೋಗ ಪರೀಕ್ಷಣಾರ್ಥ ಯಂತ್ರಗಳನ್ನು ಆಂಗ್ಲಭಾಷೆಯಲ್ಲಿ ಸ್ಪೆಕ್ಯುಲಮ ಅಥವಾ ( ಸ್ಕೋಪ Scope to see ) ಶಬ್ದವು ಅಂಗದ ಹೆಸರಿನ ಅಂಗಡ ಹಚ್ಚಿ ಕರೆಯಲಾಗುತ್ತದೆ. ಹೇಗೆಂದರೆ ಉಪಯುಕ್ತ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಭಗಂದರ, ಅರ್ಶ, ವ್ರಣಾದಿಯಂತ್ರಗಳ ವ್ಯಾಖ್ಯೆಯನ್ನು ಚಿತ್ರಸಹಿತವಾಗಿ ನಾವು ಮಿಶ್ರಿತ (ಮೂರನೇ) ಪ್ರಕರಣದಲ್ಲಿ ವಿಸ್ತರಿಸುತ್ತೇವೆ. *

---

* ಈಗ ತುಲನಾರ್ಥವಾಗಿ ವಾಗ್ಭಟಕಾರರ ನಾಡೀಯಂತ್ರ ಸಂಬಂಧಿಯಾದ ವಚನವನ್ನು ನೋಡಿರಿ — "ನಾಡೀಯಂತ್ರಾಣಿ ಶುಷಿರಾಣ್ಯೇಕಾನೇಕ ಮುಖಾನಿಚ| ಸ್ರೋತೋಗತಾನಾಂ ಶಲ್ಯಾನಾಮಾಮಯಾನಾಂಚ| ದರ್ಶನೆ ||೧೧|| ಕ್ರಿಯಾಣಾಂ ಸುಕರತ್ವಾಯ ಕುರ್ಯ್ಯಾದಾಚೂಷಣಾಯಚ ತದ್ವಿಸ್ತಾರ ಪರೀಣಾಹ ದೈರ್ಘ್ಯಂ ಸ್ರೋತೋನುರೋಧತಃ ||೧೨||

ಅ ಹೃ. ಸೂ. ಅ. ೨೫

ನಾಡೀಯಂತ್ರಗಳು (ನಳಿಕೆಯ ಆಕಾರ ಅಥವಾ ಕೊಳವೆಯುಳ್ಳವು) ಸುಷಿರ (ರಿಕ್ತಗರ್ಭತೂತು tubular) ಮತ್ತು ಒಂದು ಅಥವಾ ಅನೇಕ ಮುಖ ಉಳ್ಳವಿರುತ್ತವೆ. ಕರ್ಣ, ನಾಸಾ, ಮುಖ, ಗುದ, ಯೋನಿ, ಮೂತ್ರ, ಗರ್ಭಾದಿ, ಸ್ರೋತಸ್ಸುಗಳಲ್ಲಿ ಆಸಕ್ತವಾದ ಶಲ್ಯ (Foreign-bodies) ಮತ್ತು ಗೂಢ, ಕೀವು, ಅಶ್ಮರೀ, ಕೇಶಾದಿಗಳನ್ನು ನೋಡುವ ಮತ್ತು ಉದ್ಧರಣಾರ್ಥವಾಗಿ ಮತ್ತು ಆಮಯ (ರೋಗ) ಗಳ ನಿದಾನ (ಪರೀಕ್ಷಾ) ಮಾಡುವದರ ದೆಶೆಯಿಂದ ಕ್ರಿಯಾಸುಕರತ್ವ ಅರ್ಥಾತ್ ಕ್ರಿಯೆಯ ಸುಗಮತೆಯ ದೆಶೆಯಿಂದ (To facilitate the action) ಮತ್ತು ಆಚೂಷಣದ (ದುಷ್ಟವಾಯು, ರಕ್ತ, ಸ್ತನ್ಯ, ಕೀವು ಮೊದಲಾದವುಗಳನ್ನು ಎಳೆಯುವದರ Aspiration) ಸಲುವಾಗಿ ಮಾಡಿರುತ್ತವೆ. ಅವುಗಳ ವಿಸ್ತಾರವು (ದೊಡ್ಡದು) ಪರಿಣಾಹ (ಅಗಲವು) ಮತ್ತು ದೈರ್ಘ್ಯ (ಉದ್ದಳತೆಯು) ಕರ್ಣಾದಿಗಳ ಸ್ರೋತಸ್ಸಿನ ಅನುಸಾರವಾಗಿ ಇರತಕ್ಕದ್ದು.

ನಾಡೀಯಂತ್ರ ಸಂಖ್ಯಾ:— "ವಿಂಶತಿರ್ನಾಡ್ಯಃ"— ಸುಶ್ರು ವಚನಾನುಸಾರವಾಗಿ ನಾಡೀಯಂತ್ರಗಳು ೨೦ ಇರುತ್ತವೆ. ಭಗಂದರದಿಂದ ಶೃಂಗದ ವರೆಗೆ ೧೨ ಯಂತ್ರಗಳು ಆಗುತ್ತವೆ. ೨೦ ಸಂಖ್ಯೆಯ ಪೂರ್ತಿಯು ಹೇಗೆ ಆಗಬೇಕು? ಈ ಶಂಕೆಯ ಸಮಾ ವನ್ನು ಡಲ್ಹಣನು ಈ ಪ್ರಕಾರ ಮಾಡಿದ್ದಾನೆ. — "ಭಗಂದರಯಂ ಏಕಂ ಏಕಚ್ಛಿದ್ರಂ; ಅಪರಂ ದ್ವಿಚ್ಛಿದ್ರಂ ಅರ್ಶೋಯಂತ್ರೇಪಿ ದ್ವೇ ಚ್ಛಿದ್ರದ್ವಿಛಿದ್ರ ಭೇದೇನ; ವ್ರಣಯಂತ್ರಮೇಕಂ ವ್ರಣಚ್ಛಿದ್ರಾ ಪರೀಣಾಹಂ; ಬಸ್ತಿನೇತ್ರಂ ಚತುರ್ವಿಧಂ ವಯೋಭೇದೇನ, ಅನ್ಯೇ ವಮಾಹುಃ ಉತ್ತರಬಸ್ತಿನೇತ್ರಂ ದ್ವಿವಿಧಂ ಪುಂಸಾಂಸ್ತ್ರೀಣಾಂಚ ತ್ರಿವಿಧಮಾಹುಃ ಮೂತ್ರ ವೃದ್ಧಿ ದಕೋದರಯೋರ್ದ್ವೇ, ಮೂತ್ರವೃದ್ಧಿ ಣಾರ್ಥಮೇಕಂ, ದಕೋದರ ಸ್ರಾವಣಾರ್ಥಂ ಚೈಕಂ; ಧೂಮ ನೇ ತ್ರೀಣಿ, ಏಕಂವೈರೇಚನಿಕಂ, ಅಪರಂಸ್ನೈಹಿಕಂ, ಅನ್ಯಚ್ಚ ಪ್ರಾಯೋ ನಿರುದ್ಧ ಪ್ರಕಶಯಂತ್ರಮೇಕಂ, ಸನ್ನಿರುದ್ಧ ಗುದಯಂತ್ರ ಅಲಾಬು ಯಂತ್ರಮೇಕಂ. ಏವಂ ವಿಂಶತಿರ್ನಾಡೀಯಂತ್ರಾಣಿ ಇತಿ (ಡಲ್ಹಣಃ) ಸಾರಾಂಶವೇನೆಂದರೆ ಕೆಲವು ಒಂದೊಂದೇ ಯಂತ್ರ ತ್ತವೆ. ಉದಾ: ವ್ರಣಯಂತ್ರ ಮೂತ್ರವೃದ್ಧಿ, ದಕೋದರ, ನಿರುದ್ಧ ಸನ್ನಿರುದ್ಧಗುದ, ಅಲಾಬೂ ಮತ್ತು ಶೃಂಗ ಯಂತ್ರ, ಮತ್ತು ಉಳಿದ ವಿಧ, ತ್ರಿವಿಧ, ಅಥವಾ ಚತುರ್ವಿಧ, ಆಯು, ಸ್ತ್ರೀ-ಪುರುಷ ಅಥವಾ ಚನಿಕ ಇತ್ಯಾದಿ ಭೇದದಿಂದಿರುತ್ತವೆ. ಈ ಪ್ರಕಾರ ೨೦ಸಂಖ್ಯೆಯ ಪೂ ಯಾಗುತ್ತದೆ. ಇತ್ತೀಚೆಗೆ ನಾಡಿಯಂತ್ರಗಳ ಸಂಖ್ಯೆಯು ಅತ್ಯಧಿ ಗಿದೆ. ನಾನಾ ಪ್ರಯೋಜನ ವಶವಾಗಿ ಹೊಸಹೊಸ ಯಂತ್ರಗಳು ಆಗು ತ್ತವೆ ಅವುಗಳ ನಿರ್ಮಾಣಾರ್ಥವಾಗಿ ಲೋಹಾದಿ ಧಾತು, ಕಾಜು, ರ

---

ಇದರ ಮುಂದೆ ವಾಗ್ಭಟರು ಕೆಲವು ವಿಶೇಷ ನಾಡೀ ಯಂತ್ರಗಳ ಯನ್ನು ವಿಸ್ತರಿಸಿ ಮನೋಹರವಾದ ವ್ಯಾಖ್ಯೆಯನ್ನು ಮಾಡಿ ಆದನ್ನು ತೃತೀಯ ಪ್ರಕರಣದಲ್ಲಿ ಸಚಿತ್ರವಾಗಿ ವರ್ಣನೆ ಮಾಡಲಾಗು ಈಗ ಇಲ್ಲಿ ಕ್ರಿಯಾ ಸೌಕರ್ಯಾರ್ಥದ ವ್ಯಾಖ್ಯೆಯನ್ನು ಮಾಡುತ್ತೇನೆ.

ೋಡು,(ಪ್ಲಾಸ್ಟಿಕ್)ಇತ್ಯಾದಿ ವಸ್ತುಗಳನ್ನು ಪಯೋಗಿಸುತ್ತಾರೆ. ಆದ್ದರಿಂದ ಾವೃತ್ತೀಯ ಪ್ರಕರಣದಲ್ಲಿ ಸಚಿತ್ರವಾಗಿ ವರ್ಣನೆಯನ್ನು ಮಾಡುತ್ತೇವೆ.

## ಶಲಾಕಾಯಂತ್ರಗಳು.

### (Probes or Rod-Like Instruments)

ಶಲಾಕಾಯಂತ್ರಾಣ್ಯಪಿ ನಾನಾ ಪ್ರಕಾರಾಣಿ, ನಾನಾ ಪ್ರಯೋಜ ಾನಿ ಯಥಾಯೋಗ ಪರಿಣಾಹ ದೀರ್ಘಾಣಿ (†) ಚ ತೇಷಾಂ ಗಂಡೂ ಪದ ಸರ್ಪಫಣಶರಪುಂಖಬಡಿಶಮುಖೆ ದ್ವೇ ದ್ವೇ, ಏಷಣವ್ಯೂಹನಚಾಲ ನಾಹರಣಾರ್ಥಮುಪದಿಶ್ಯೇತೆ, ಮಸೂರದಲಮಾತ್ರಮುಖೆ ದ್ವೆ ಕಿಂಚಿ ದಾನತಾಗ್ರೆ ಸ್ರೋತೋಗತಶಲ್ಯೋದ್ಧರಣಾರ್ಥಂ, ಷಟ್ ಕಾರ್ಪಾಸ ಕೃತೋಷ್ಣೀಷಾಣಿ, ಪ್ರಮಾರ್ಜನ ಕ್ರಿಯಾಸುಃ; ತ್ರೀಣಿದರ್ವ್ಯಾಕೃತೀನಿ ಖಲ್ಲಮುಖಾನಿ, ಕ್ಷಾರಾಷಧ ಪ್ರಣಿಧಾನಾರ್ಥಂ, ತ್ರೀಣಿ ಅನ್ಯಾನಿ ಜಾಂಬವ ವದನಾನಿ, ತ್ರೀಣಿ ಅಂಕುಶವದನಾನಿ, ಷಡೇವಾಗ್ನಿಕರ್ಮಸು ಅಭಿಪ್ರೇ ತಾನಿ; ನಾಸಾರ್ಬುದಾಹರಣಾರ್ಥಮೇಕಂ ಕೋಲಾಸ್ಥಿದಲಮಾತ್ರ ಮುಖಂ ಖಲ್ಲತೀಕ್ಷ್ಣೋಷ್ಠಂ, ಅಂಜನಾರ್ಥಮೇಕಂ ಕಲಾಯಪರಿ ಮಂಡಲಮುಭಯತೋ ಮುಕುಲಾಗ್ರಂ; ಮೂತ್ರಮಾರ್ಗವಿಶೋಧ ನಾರ್ಥಮೇಕಂ ಮಾಲತೀಪುಷ್ಪ ವೃಂತಾಗ್ರಪ್ರಮಾಣಪರಿಮಂಡಲ ಮಿತಿ ||೧೪|| (ಸು. ಸೂ. ಅ. ೭)

---

ಗಳ ಮೊಳಕೆಗಳಮೇಲೆ ಕ್ಷಾರ ಅಥವಾ ಅಗ್ನಿಕರ್ಮವನ್ನು ಮಾಡುವದಿರುತ್ತಿ ದೆಯೋ ಆಗ ಅರ್ಶೋಯಂತ್ರವನ್ನು ಗುದದಲ್ಲಿ ಸೇರಿಸಿ ಮೊಳಕೆಗಳನ್ನು ಛಿದ್ರದಲ್ಲಿ ಸಿಕ್ಕಿಸಿ ಆದರ ಮೇಲೆ ಕ್ಷಾರದ ಪ್ರತಿಸಾರಣ (ಲೇಪಿಸುವದು) ಮಾಡಲಾಗುತ್ತಿದೆ. ಅಥವಾ ಅದನ್ನು ಅಗ್ನಿ ಶಲಾಕೆಯಿಂದ ಸುಡಲ್ಪಡು ತ್ತದೆ. ಅರ್ಶೋಯಂತ್ರಗಳು ಇಲ್ಲಿ ಕ್ಷಾರಾದಿ ಕ್ರಿಯಾಗಳ ಸೌಕರ್ಯಾರ್ಥ ವಾಗಿ ಮಾಡಲ್ಪಡುತ್ತವೆ. ಮತ್ತು ಈಗ ಉದಾಹರಣಾರ್ಥವಾಗಿ ನವೀನ ಶಲ್ಯ ವಿಜ್ಞಾನದಿಂದ ತೆಗೆದು ಈ ಆಶಯದ ಸ್ಪಷ್ಟೀಕರಣ ಮಾಡುತ್ತೇವೆ. ಶಸ್ತ್ರ ಕರ್ಮ ಮಾಡುವ ಸಮಯದಲ್ಲಿ ಇತ್ತೀಚಿಗೆ Towel-clip (ಟಾವೆಲ ಕ್ಲಿಪ್)ದ ಪ್ರಯೋಗವು ಮಾಡಲ್ಪಡುತ್ತದೆ. ಅರ್ಥಾತ್ ತ್ವಚೆ

ಶಲಾಕಾಯಂತ್ರಗಳು ನಾನಾಪ್ರಕಾರ ಮತ್ತು ನಾನಾ ಪ್ರ...
ಉಳ್ಳವು ಇರುತ್ತವೆ. ಇವುಗಳ ಅಗಲವು ಮತ್ತು ಉದ್ದಳತೆಯು ...
ತಾನುಸಾರವಾಗಿ ನ್ಯೂನಾಧಿಕವಾಗಿರುತ್ತವೆ. ಅವುಗಳಲ್ಲಿ ಗಂ...
ಮುಖ ೨, ಸರ್ಪಫಣ೨, ಶರಪುಂಖ ೨ ಮತ್ತು ಬಡಿಶಮುಖ ೨ ಇ...
ಇವುಗಳ ಕಾರ್ಯವು ಯಥಾಕ್ರಮವಾಗಿ ಏಷಣ, ವ್ಯೂಹನ, ...
ಮತ್ತು ಆಹರಣ ಇರುತ್ತದೆ. ಮಸೂರದಲ (ಚೆನ್ನಂಗಿಬೇಳೆ) ...
ಮಾತ್ರ ಮುಖಉಳ್ಳವು ೨ ಅದರ ಅಗ್ರವು (ತುದಿಯು) ಸ್ವಲ್ಪ ...
ಸ್ರೋತೋಗತ ಶಲ್ಯಗಳನ್ನು ತೆಗೆಯುವದಕ್ಕೆ ಪ್ರಯುಕ್ತವಾಗಿ...

---

ಯನ್ನು ಕತ್ತರಿಸಿದ ನಂತರ ಕ್ಷತ (Wound) ದ ಆಕ್ತಿಂದಿತ್ತ ಬಟ್ಟೆ...
ಸುತ್ತಿ ಕ್ಲಿಪ (ಅಥವಾ ಬಂಧನ) ದಿಂದ ತ್ವಚೆಯನ್ನು ಜೋಡಿಸಲಾ...
ಇದರಿಂದ ರೋಗಿಯ ತ್ವಚೆಯು ವ್ರಣದೂಷಿತವಾಗಬಾರದೆಂಬ ...
ರಕ್ತ, ಕೀವು ಮೊದಲಾದವುಗಳಿಂದ ತ್ವಚೆಯು ದೂಷಿತವಾಗ...
ಇದಾದರೂ ಕ್ರಿಯಾಕರಣಾರ್ಥವಾಗಿಯೇ ಇದೆ. ಈ ಪ್ರಕಾ...
ಶೇಷಾಂಗಪರಿರಕ್ಷಾರ್ಥವಾಗಿಯೇ ಇವೆ. ಕ್ಲಿಪ್ (clip) ವಸ್ತುತಃ ...
ಯಂತ್ರ (Forceps) ಅಥವಾ ಸಂದಂಶ ಯಂತ್ರಗಳ ಶ್ರೇಣಿ...
ಸಂಬಂಧವಿಡುತ್ತದೆ. ವಾಗ್ಭಟೋಕ್ತ ಅಂಗುಲಿತ್ರಾಣವೂ ಸಹ ...
ಸೌಕರ್ಯಾರ್ಥವಿದೆ.

(†) ಶಲಾಕಾಯಂತ್ರ ಸಂಬಂಧಿಯ ವಾಗ್ಭಟರ ವಚನವು—"...
ಕಾಖ್ಯಾನಿ ಯಂತ್ರಾಣಿ ನಾನಾ ಕರ್ಮಾಕೃತೀನಿ ಚ। ಯಥಾ ...
ಪ್ರಮಾಣಾನಿ .... ॥೨೭॥ ಅ. ಹೃ. ಅ. ೨೫ — ಶಲಾಕಾಖ್ಯ (ಶ...
ಎಂಬುವ) ಯಂತ್ರಗಳು ನಾನಾ ಪ್ರಕಾರದ ಕೆಲಸ (Operation...
ಉಪಯೋಗವುಳ್ಳವೂ ನಾನಾ ವಿಧವಾದ ಆಕೃತಿಯುಳ್ಳವೂ ಇ...
ಇವುಗಳ ಪರಿಣಾಮವು (Size) ಯಥಾಯೋಗ್ಯವಾಗಿರತಕ್ಕದ್ದು. ...
ಮುಂದೆ ವಾಗ್ಭಟರು "ಸುಶ್ರುತವತ್ ಗಂಡೂಪದವಖಾದಿ'' ಎಂದು ...
ಮತ್ತು ಕಾರ್ಯಗಳ ವರ್ಣನೆಯನ್ನು ಮಾಡಿದ್ದಾರೆ. ಅದರ ಉ...
ವನ್ನು ನಾವು ಮುಂದಿನ ಪುಟಗಳಲ್ಲಿ ಮಾಡುತ್ತೇವೆ.

ಡು ಶಲಾಕಾಯಂತ್ರಗಳು ಹೀಗೆ ಇವೆ. ಅವುಗಳ ಒಂದು ಸಿರೆ (ಭಾಗ) ಮೇಲೆ ಕಾರ್ಪಾಸವು (ಅರಳೆಯು) (ತೂಲ– Cootton wool) ತ್ತಿ ಕೊಂಡಿರುತ್ತದೆ. ಇದು ವ್ರಣಗಳ ಪ್ರೋಂಛನ (ಪೋಛನೆ= ಒರೆಸುವ ಕಾರ್ಯದಲ್ಲಿ ವ್ಯವಹರಿಸಲ್ಪಡುತ್ತದೆ. ಮೂರು ದರ್ವೀ (ಸೌಟು ಅಥವಾ ಮಚಿ) ಯ ಆಕಾರ ಉಳ್ಳ ಖಲ್ಲಮುಖ ಖಲ್ಲವತ್ (ಗಂಭೀರವಾದ ಅಥವಾ ನಿಮ್ನ) ಕ್ಷಾರ ಮತ್ತು (ದ್ರವ) ಔಷಧ ಹಾಕಲಿಕ್ಕೆ ಬರುತ್ತದೆ. ತ್ತು ೩ ಜಾಂಬವ ಮುಖ (ನೇರಲ ಹಣ್ಣಿನ ಸದೃಶ ದುಂಡು ಮತ್ತು ಉದ್ದವಾಗಿ Oval- shaped) ಮತ್ತು ೩ ಅಂಕುಶಾಕಾರ (Hook shaped ಮೀನ ಹಿಡಿಯುವ ಮುಳ್ಳುಕೊಂಡಿಯಂತೆ) ಇರುತ್ತವೆ. ಇವು ರು ಶಲಾಕೆಗಳು ಅಗ್ನಿ ಕರ್ಮ (Cautery) ದ ದೆಶೆಯಿಂದ ಉಪ ಯೋಗವುಳ್ಳವಿವೆ. ನಾಸಾರ್ಬುದಾಹರಣಾರ್ಥವಾಗಿ ಶಲಾಕಾ- ಇದರ ಆಕಾರವು ಕೋಲಾಸ್ಥಿ (ಬಾರಿಯ ಬೀಜದ ಅರ್ಧಭಾಗದಂತೆ) ಯ ಸದೃಶ ರುತ್ತ ಆದರ ಓಷ್ಠ (ತುದಿ) ಹುರುಬರಕದಂತೆ ಇರುತ್ತದೆ. ಪರಂತು ಸ್ವಲ್ಪ ತೀಕ್ಷ್ಣವಾಗಿರತಕ್ಕುದು. ಅಂಜನ ಶಲಾಕೆಯು (ಸುರಮಾಜೊ ಡಿಗೆ ಹಚ್ಚುವದು. Collyrium rod) ಒಂದು ಕಲಾಯಪರಿ ಮಂಡಲ (ಕಡಲೆಯ ಕಾಳಿನಷ್ಟು ದಪ್ಪ) ಮತ್ತು ಎರಡೂ ಸಿರೆಗಳ ಮೇಲೆ ಮುಕುಲ (ಪುಷ್ಪಕಲಿಕಾ–ಮೊಗ್ಗಿ–Bud) ದಂತೆ ಸ್ವಲ್ಪ ಸ್ಥೂಲ ವಾಗಿರುತ್ತದೆ. ಮತ್ತು ಮೂತ್ರ ಮಾರ್ಗ (Urethra ಮೂತ್ರಕೊಳವೆ) ದ ಶೋಧನಾರ್ಥವಾಗಿ ಒಂದು ಶಲಾಕೆಯು, ಆದು ಮಾಲತೀ ಪುಷ್ಪವೃಂತ "ಮಲ್ಲಿಗೆಯ ಹೂವಿನನಳಿಕೆಯ ಆಕಾರದಂತೆ ವೃಂತದಂತೆ) ದಂತೆ ದುಂಡಾಗಿರುತ್ತದೆ

ವಕ್ತವ್ಯ— ಶಲಾಕೆಯ ಅರ್ಥವು ಕಡ್ಡಿ (Long needle) ಯಾಗಿರುತ್ತದೆ. ಉದಾಹರಣಾರ್ಥವಾಗಿ ನೀವು ಸ್ವೆಟರಮಾಡುವ (ಹಣೆಯುವ) ಕಡ್ಡಿ (Knitting needle) ಯನ್ನು ತೆಗೆದುಕೊಳ್ಳಬಹುದು. ಸಲ್ಪ ಹೆಚ್ಚು ಕಡಿಮೆ ಅಂತರದಿಂದ ಇವು ೨೮ ಪ್ರಕಾರದವಿರುತ್ತವೆ. ಮೂಲ ಪಾಠವನ್ನು ನೋಡಿ ಎಣಿಕೆಯನ್ನು ಮಾಡಿಕೊಳ್ಳತಕ್ಕದು. ೧) ಗಂಡೂಪದ ಮುಖೀ ಶಲಾಕೆಯು (ಒಂದು ಸಣದು ಮತ್ತೊಂದು ದೊಡ್ಡದು.)

ಈ ಶಲಾಕೆಯು ಗಂಡೂಪದ ( ಮಳೆಯಹುಳ :— ಜಂತು Earth- worm) ಗಳ ಮುಖದಂತೆ ಇರುತ್ತದೆ. ಅರ್ಥಾತ್ ಮುಖವು ಗಂಡೂಪದಗಳ ಮುಖದ ಸದೃಶವಾಗಿ ಕಿಂಚಿತ್ ಸ್ಥೂಲ ವಾಗಿರುತ್ತದೆ. (ಚಿತ್ರ ೧೬) ಇದಕ್ಕೆ ಇಂಗ್ಲದಲ್ಲಿ Blunt probe ತ್ತಾರೆ. ಇದರ ಕಾರ್ಯವು ಏಷಣ, ಅನ್ವೇಷಣ ಅಥವಾ ಹುಡುಕು (Exploration) ಇರುತ್ತದೆ. ಭಗಂದರ, ನಾಡೀವ್ರಣ ಇತ್ಯಾದಿ ಅದನ್ನು ಪ್ರವೇಶ ಮಾಡಿಸಿ ವ್ರಣದ ಆಳವನ್ನೂ ಮತ್ತು ಕೀವು ಮೊದಲ ಗಳ ಜ್ಞಾನವನ್ನು ಮಾಡಿಕೊಳ್ಳುವದಿದೆ. ಈಗ ದೊರೆಯುವ (Pro ಪ್ರೋಬ ಎಂಬುದರ ಸಿರೆಯುಂತೂ ಗಂಡೂಪದ ಮುಖಿಯಂತೆ (Bulbous) ಇರುತ್ತದೆ. ಮತ್ತು ಎರಡನೆಯ ಸಿರೆಯಮೇಲೆ ಸೂಚೀಪಾಶವು (Needle-eye) ಇರುತ್ತದೆ. ಸ್ಥೂಲಾಗ್ರ ಇ ಭಾವವಂತೂ ಸ್ಪಷ್ಟವಿದೆ. ಅರ್ಥಾತ್ ವ್ರಣಗಳ ಒಳಗೆನಡಬಾರದು; ಪೀಡೆಯನ್ನು ಕೊಡಬಾರದು ಎಂಬುದೇ ಇದೆ. ಸೂಚೀಪಾಶದ ಪ್ರ ಗವೂ ಕೆಲವೇಳೆ ಉಪಯೋಗಿ ಮಾಡಲ್ಪಡುತ್ತದೆ. ವ್ರಣವು ಬಹಳ ಗ ವಿದ್ದಾಗ ಸೂಚಿಪಾಶದಲ್ಲಿ ಸೂತ್ರವನ್ನು ಹಾಕಲಾಗುತ್ತಿದೆ. ಯಾ ಸಂಪೂರ್ಣ ಶಲಾಕೆಯು ವ್ರಣದಲ್ಲಿ ಹೋಗಿಬಿಟ್ಟರೆ ಸೂತ್ರದ್ವಾರ ( ದಿಂದ ಅದನ್ನು ಎಳೆಯಲಾಗುತ್ತಿದೆ. ಅನ್ಯಥಾ ಶಲಾಕೆಯನ್ನು ಹೊರಗೆ ಯುವದು ಕಠಿಣವಾಗುವದು. ಗಂಡೂಪದ ಮುಖೀಯಂತ್ರದ ಸ ವಾಗಿ ಕೆಳಗೆ ಬರೆದ ವರ್ಣನೆಯನ್ನು ನೆನಪಿನಲ್ಲಿಡುವದು ಸುಯೋ ವಾಗಿದೆ.

Probe— A flexible narrow shaft, about long with a bulbous point at one end and a nee eye at the other.

Uses— (i) To explore a sinus; (a) to know t depth of the sinus; (b) to know if a foreign bo

present at the bottom of the sinus; (c) to know whether the sinus leads to the bone underneath, (d) if it leads to the bone, to know whether there a dead piece of bone and if present, whether has become loose or not.

(ii) To diagnose a fistula:- Its variety, direction and extent. To see if a fistula - in - ano is complete or incomplete.

(iii) In circumcision operation, before cutting the prepuce, a probe is always passed inside the prepuce to see whether the glass is free underneath.

Note— There is a longer and stouter probe about 10" to 12" in length, used in operation of the cancer of the breast and other diseases.

ಭಾವಾರ್ಥ:— ಪ್ರೋಬ ಎಂಬುದು ಒಂದು ಮೃದುವಾದ, ಮತ್ತು ತೆಳ್ಳಗಾದ ಶಲಾಕಾ ಇರುತ್ತದೆ, ೬ ಇಂಚು ಉದ್ದ, ಒಂದು ಸಿರೆಯು ಮೇಲೆ ದಪ್ಪವಾಗಿ ಮತ್ತೊಂದರ ಮೇಲೆ ಸೂಚೀಪಾಶಯುಕ್ತವಾಗಿದೆ.

ಪ್ರಯೋಗ:— ೧) ನಾಡೀ ವ್ರಣ (Sinus) ದ ಅನ್ವೇಷಣೆಯನ್ನು ಮಾಡುವದು— (ಕ) ಅದರ ಆಳವನ್ನು ತಿಳಿಯುವದು, (ಖ) ಇದರ ಕೊನೆಯ ಮೇಲೆ ಯಾವದಾದರೂ ಶಲ್ಯವು ಇರುವದಿಲ್ಲವೇ ? (ಗ) ನಾಡೀ ವ್ರಣವು ಎಲುವಿನವರೆಗೆ ಮುಟ್ಟುವದಿಲ್ಲವೇ ? (ಘ) ಒಂದು ವೇಳೆ ಅಸ್ಥಿಯು ವರೆಗೆ ಮುಟ್ಟುತ್ತಿದ್ದರೆ, ಅದರ ಯಾವದಾದರೂ ಭಾಗವು ನಿರ್ಜೀವವಾಗಿರುವದಿಲ್ಲವೇ ? ಒಂದು ವೇಳೆ ಎಲುವು ಮೃತವಿದ್ದರೆ ಅದು ಶಿಥಿಲವಿದೆಯೋ ಅಥವಾ ಕಠಿಣವೋ ? (೨) ಭಗಂದರದ ನಿದಾನವನ್ನು ಮಾಡುವದು:— ಅದರ ಭೇದದಿಶೆ, ಮತ್ತು ಪ್ರಮಾಣವು ಭಗಂದರವು, ಸಂಪೂರ್ಣವಿದೆಯೋ ( ಯಾವದು ಗುದದ (Rectum) ಒಳಗೆ ಮುಟ್ಟಿದೆಯೋ ) ಅಥವಾ

ಅಸಂಪೂರ್ಣವಿದೆಯೋ ? ಎಂಬುದನ್ನು ನೋಡಬೇಕು. (ಶಲಾಕೆ ಭಗಂದರದ ಬಾಹ್ಯ ಮುಖದ ಮೇಲೆ ಹಾಕಿ ಮತ್ತು ಮುಖದ ಮೇ ಮತ್ತು ಗುದದ ಒಳಗಡೆ ಬೆರಳನ್ನು ಕೊಟ್ಟು ನೋಡಬೇಕು. ವೇಳೆ ಶಲಾಕೆಯು ಅಂಗುಲಿಗೆ ಮುಟ್ಟಿದರೆ ಸಂಪೂರ್ಣವಿದೆಯೆಂ ವಾದರೆ ಅಸಂಪೂರ್ಣವಾಗಿದೆಯೆಂದೂ ತಿಳಿಯತಕ್ಕದ್ದು. (೩) ಪ್ರಕಶದಲ್ಲಿ (ಅರ್ಥಾತ್ ಯಾವಾಗತೊಗಲು ಶಿಶ್ನಮಂಡದ ಮೇ ಕೆಳಗಿಳಿಯುವದಿಲ್ಲವೋ ) ಅಗ್ರ ಚರ್ಮವನ್ನು ಕೊಯ್ಯುವದರ ದಲ್ಲಿ ಗಂಡೂಪದ ಶಲಾಕವನ್ನು ಅದರ ಒಳಗೆ ಸೇರಿಸಿ ನೋಡ ಅಂದರೆ ಚರ್ಮವನ್ನು ಶಿಶ್ನಮಂಡದಿಂದ ಬೇರೆಯಾಗಿದೆಯೋ ಹತ್ತಿಕೊಂಡಿದೆಯೋ ಎಂಬುದನ್ನು ತಿಳಿಯತಕ್ಕದ್ದು. (Adhesi

ನೋಟು:- ಇದರ ಹೊರತಾಗಿ ಒಂದು ಪ್ರೋಬ ೧೦ರಿಂದ ೧೨ ಉದ ವಾಗಿರುತ್ತದೆ. ಅದು ಸ್ತನಾರ್ಬುದ (ಸ್ತನದ ಗಂಟು) ಅಥವಾ ರೋಗಗಳಲ್ಲಿ ಕೆಲಸಕ್ಕೆ ಬರುತ್ತದೆ.

ಈಗೂ ಸಹ, ಸುಶ್ರುತವಂತೆ ಎರಡು ಶಲಾಕೆಗಳು (Pro ಇರುತ್ತವೆ ಮತ್ತು ಕೆಲಸವೂ ಸಹ ಅದರಂತೆಯೇ ಇದೆ. *

---

* "ಉಭೆ ಗಂಡೂಪದಮುಖೆ ಸ್ರೋತೋಭ್ಯಃ ಶಲ್ಯಹಾ [ಅ. ಹೃ. ಸೂ. ಅ ೨೫) ಅರ್ಥಾತ್ ಗಂಡೂಪದ ಮುಖಶಲಾ ಎರಡೂ ಸ್ರೋತಸ್ಸುಗಳಿಂದ ಶಲ್ಯ ಹರಣಾರ್ಥವಾಗಿ ಪ್ರಯುಕ್ತವಾ ಸರ್ವ ಸಾಮಾನ್ಯ ಏಷಣಕರ್ಮ (Probing) ಇದಕ್ಕೂ ವಾಗ್ಭಟಕಾರರು ಹೇಳಿದ್ದಾರೆ. ಉಳಿದದ್ದೆಲ್ಲ ಸುಶ್ರುತದಂತೆ ಎಂದು ಬೇಕು. † 'ವ್ಯೂಹನೇऽಹಿಫಣಿವಕ್ತ್ರೆ ದ್ವಾದಶದ್ವಾದಶಾಂಗು (ಅ. ಹೃ. ಸೂ. ಅ. ೨೫)- ಅರ್ಥಾತ್ ಅಹಿಫಣವಕ್ತ್ರ (ಸರ್ಪಫಣೆ ಉಳ್ಳ ಶಲಾಕೆಗಳು ಎರಡು ಇರುತ್ತವೆ. ೧೦ ಮತ್ತು ೧೨ ಅಂಗುಲ ವಾದವು. ಕಾರ್ಯವು— ವ್ಯೂಹನ (ಕತ್ತರಿಸಿದ ಭಾಗವನ್ನು ಮೇಲಕ್ಕೆ ವದು) ಅಥವಾ Retraction (ಹಿಂದೆ ಸರಿಸುವದು ಅಥವಾ ವದು) ವಾಗ್ಭಟಕಾರರ ಈ ವಚನವು ಎಂದಿಗೂ ಸುಶ್ರುತಕಾರರ ನಾರ್ಥಕವೇ ಇದೆ.

...ಗೋಬದ ಮೇಲೆ ಅರಳೆಯನ್ನು ಹಚ್ಚಿ ಕೊರಳಲ್ಲಿ ಔಷಧವನ್ನು ಹಚ್ಚಲು ...ರುತ್ತದೆ. ಮತ್ತು ಕಿವಿಯಲ್ಲಿ ಸಾವಧಾನವಾಗಿ ಹಾಕಿ ಮಲ, ಕೀವು ...ಮೊದಲಾದವನ್ನು ತೆಗೆಯಲು ಬರುತ್ತದೆ.

(೨) ಸರ್ಪಫಣಮುಖೀ ಶಲಾಕಾ— (Hooded Rod) ಸರ್ಪ ...ಣಿ (Snake's hood) ಯಂತೆ ಯಾವ ಶಲಾಕೆಯ ಮುಖವು (ಒಂದು ...ರೆ) ಇರುತ್ತದೆಯೋ ಅದಕ್ಕೆ ಸರ್ಪಫಣೀ ಶಾಲಾಕಾ ಎನ್ನುತ್ತಾರೆ. ಇದರ ...ಾರ್ಯವು ಸುಶ್ರುತರು 'ವ್ಯೂಹನಂ' ಎಂದು ಬರೆದಿದ್ದಾರೆ. ಅದರ ಟಿಪ್ಪಣಿ ...ಯನ್ನು ಡಲ್ಹಣನು ಹೀಗೆ ಬರೆದಿದ್ದಾನೆ.- "ವ್ಯೂಹನಂ ಊರ್ಧ್ವೀಕರಣಂ ...ಛಿತ್ವಾ ಉತ್ತುಂಡಿ ತಸ್ಯ ಉದ್ಧರಣಾರ್ಥಮ್" ಅರ್ಥಾತ್ ಕತ್ತರಿಸಿದ ವ್ರಣ ...ಗಳ ತುದಿಯನ್ನು ಮೇಲೆ ಎತ್ತುವದಕ್ಕೆ ವ್ಯಹನೆ ಎನ್ನುತ್ತಾರೆ. ಅಹುದು ...ಇದೇ ಪ್ರಯೋಜನದ ದೆಶೆಯಿಂದ ಈಗ Retractos (ರಿಟ್ರೆಕ್ಟರ್) ದ ...ಪ್ರಯೋಗವನ್ನು ಮಾಡಲಾಗುತ್ತಿದೆ. ಆದ್ದರಿಂದ ಪ್ರಾಚೀನ ಸರ್ಪಫಣೀ ...ಶಲಾಕೆಗಳ ಅಂಗ್ರೇಜೀ ಹೆಸರು Retractor ಇದೇ ಇರುತ್ತದೆ ಇವು ...ಸಣ್ಣವು ದೊಡ್ಡವು ಎಂದು ಸರ್ಪಫಣೀ ಶಲಾಕೆಗಳು ಎಷ್ಟೋಪ್ರಕಾರವಾಗಿ ...ರುತ್ತವೆ. ಆಧುನಿಕ ಶಲ್ಯವಿಜ್ಞಾನದಲ್ಲಿ ಸರ್ಪಫಣೀ ಯಂತ್ರದ ವರ್ಣನೆಯ ಈ ಪ್ರಕಾರವಾಗಿದೆ.

Retractors— Are made of various patterns.

(1) Hooked — May be single, double or multiple the points of the hooks are always blunt, lest they should puncture or otherwise injure the structures retracted. [ii] Flattened and curved at different angles— Aguide to surgical Instruments.

ಭಾವಾರ್ಥ:— ರಿಟ್ರೇಕ್ಟರಗಳು ಎಷ್ಟೋ ಆಕೃತಿಯುಳ್ಳವು ಇರು...ತ್ತವೆ. (ಕ) ಅಂಕುಶದಂತೆ ಜೊಗ್ಗಿದವು (Hooked)ದ ಕಿಂತಲೂ ಸುಶ್ರು...ತರ ಫಣೀ Hooked ಶಬ್ದವು ಅತ್ಯಂತ ಪ್ರಶಸ್ತವಿದೆ.) ಒಂದು ಫಣಿ...ಯುಳ್ಳವು ಎರಡು ಅಥವಾ ಅದಕ್ಕೂ ಹೆಚ್ಚು ಫಣಿಯುಳ್ಳವು ಇರುತ್ತವೆ,

ಅಂಕುಶ (ಫಣಿ)ಗಳ ಸಿರೆಗಳು ಯಾವಾಗಲೂ ಸ್ಥೂಲ (Blunt) ತ್ರವೆ. ಯಾಕಂದರೆ ತ್ವಚೆ ಮಾಂಸಪೇಶಿಗಳು ಇತ್ಯಾದಿಗಳ ರಚನೆಗಳು ಹಿಂದೆಸರಿಸುವ ಅಥವಾ ಎಳೆಯುವ ಸಮಯದಲ್ಲಿ ಅವಕ್ಕೆ ಹಾನಿ ಬಾರದು. (ಬ) ಈ ಹೆಡೆ (ಅಥವಾ ಫಣಿ) ಯು ಹಲಚೆಯಾಗಿ ಮತ್ತು ಭಿನ್ನ ಭಿನ್ನವಾದ ಮೂಲೆ (Angles) ಗಳ ಮೇಲೆ ಸುತ್ತಿ ರುತ್ತದೆ. (ಈ ಎಲ್ಲ ವಿಷಯವು ಸುಶ್ರುತರ ಫಣಿ ಎಂಬುವ ಶಬ್ದದಿಂ ಬಂದು ಬಿಡುತ್ತದೆ.)

Uses— (i) To draw apart the edges of wound during an operation, so that free access may be had to the deeper structures, [ii] to steady the tissues, while being freed by direct (iii] To hold important structures aloof so as to protect them from injury. (iv) To check oozing from small vesselss in the edges of an incision.

ಪ್ರಯೋಗ— (ಕ) ಕ್ಷತ ಅಥವಾ ವ್ರಣಗಳ ತುದಿಯನ್ನು ಶಸ್ತ್ರಕರ್ಮ ಮಾಡುವ ಸಮಯದಲ್ಲಿ ಬೇರೆ ಮಾಡುವದು ಅಥವಾ ಎಳೆಯುವದು, ರಿಂದ ಗಂಭೀರವಾದ ರಚನೆಗಳ ವರೆಗೆ ಪ್ರಾಪ್ತಿ (ಮುಟ್ಟು) ಯಾಗು (ಬ) ಮಾಂಸಪೇಶಿಗಳು, ಸ್ನಾಯುಗಳು ಇತ್ಯಾದಿಗಳನ್ನು ಛೇದನ ಮಾ ಸಮಯದಲ್ಲಿ ದೃಢತೆಯಿಂದ ಹಿಡಿದಿರಬೇಕು. (ಗ) ಅವಶ್ಯಕ (ಮರ್ಮಾದಿಗಳು) ಗಳ ರಕ್ಷಾರ್ಥವಾಗಿ ಬೇರೆಯಾಗಿಡುವದು. (ಘ) ಭಾಗಗಳ ತುದಿಯಿಂದ ರಕ್ತ ಸ್ರಾವವನ್ನು ತಡೆಯುವದು.

(Note)— Retractors should be used gen ರಿಟ್ರೇಕ್ಟರನ್ನು ಮೃದುಭಾವದಿಂದ ಪ್ರಯೋಗ ಮಾಡತಕ್ಕದ್ದು. ಪ್ರ ಸಂಬಂಧಿಯ ಎಲ್ಲ ಭಾವಗಳು ವ್ಯೂಹನ ಶಬ್ದದಲ್ಲಿ ಬರುತ್ತವೆ. ಹೇ ಡಲ್ಹಣನು "ವ್ಯೂಹನಂ ಊರ್ಧ್ವೀಕರಣಂ ಛಿತ್ವಾ ಉತ್ತಂಡಿತಸ್ಯ ಣಾರ್ಥಂ" ಇದರಿಂದ ಸ್ಪಷ್ಟಪಡಿಸಿದ್ದಾನೆ. ನಮ್ಮ ಋಷಿಗಳು ಸ್ವಲ್ಪ ಗಳಲ್ಲಿ ಬಹಳ ಅರ್ಥವನ್ನು ಗರ್ಭೀಕರಿಸುತ್ತಿದ್ದರು.

ಆಧುನಿಕ ಶಲ್ಯವಿಜ್ಞಾನದಲ್ಲಿ ನಾನಾ ವಿಧವಾದ ಸರ್ಪಮುಖೀಶಲಾಕೆಗಳು ಭಿನ್ನ ಭಿನ್ನವಾದ ಅಂಗಗಳ ದೆಸೆಯಿಂದ ಕೆಲಸಕ್ಕೆ ಬರುತ್ತವೆ. ಉದಾ:— Abdominal Retractor (ಉದರದ ದೆಸೆಯಿಂದ) Cheek Retractor (ಕಪೋಲಗಳನ್ನು ತೆಗೆಯುವದರ ಸಲುವಾಗಿ Eye-lid Retractor (ಕಣ್ಣುರೆಪ್ಪೆಗಳನ್ನು ತೆರೆದುಹಿಡಿದು ಬೇರೆ ಬೇರೆ ಮಾಡುವದರದೆಸೆಯಿಂದ) Vaginal Retractor (ಯೋನಿದ್ವಾರವನ್ನು ತೆಗೆಯುವದರ ದೆಸೆಯಿಂದ) Wound Retractor (ವ್ರಣಗಳ ತುದಿಗಳನ್ನು ಬೇರ್ಪಡಿಸುವದಕ್ಕೆ ಇತ್ಯಾದಿಗಳು.

## ಶರಪುಂಖಮುಖೀ ಶಲಾಕಾ

(Arrow-root like instrument) ಶರಪುಂಖವೆಂದು ಬಾಣದ ಮೂಲ ಭಾಗಕ್ಕೆ ಎನ್ನುತ್ತಾರೆ. ಹೀಗೆ 'ಶರಪುಂಖಃ ಶರಗುಣಸಂಧಾನ ಸ್ಥಾನಮ್' (ಡಲ್ಲಣಃ) ಅರ್ಥಾತ್ ಬಾಣದ ಯಾವ ಮೂಲವು ಹಗ್ಗದ ಸಂಗಡ ಹಚ್ಚಿರುತ್ತದೋ ಅದು ಶರಪುಂಖ (Root of the arrow) ವೆಂದೆನ್ನಿಸಿಕೊಳ್ಳುತ್ತದೆ. ಅದೇ ಆಕಾರದ ಯಂತ್ರಕ್ಕೆ ಶರಪುಂಖ ಶಲಾಕಾ ಎಂದೆನ್ನಲಾಗಿದೆ. ಇದರ ಕಾರ್ಯವು ಸುಶ್ರುತರು ಚಾಲನ * (ಅಗಲಾಡಿಸುವದು Moving to and fro) ಎಂದು ಬರೆದಿದ್ದಾರೆ. ಇದರಿಂದ ಅಸ್ಥಿಗಳಲ್ಲಿ ಸಿಕ್ಕ ಶಲ್ಯವು ಶಿಥಿಲ (ಸಡಿಲು) ಆಗುವದು. ಇಂಥ ಯಂತ್ರಗಳಿಗೆ ಈಗ Elevators (ಎಲಿವೇಟರ) ಎನ್ನುತ್ತಾರೆ. ಅವು ಎಷ್ಟೋ ಪ್ರಕಾರದವಿರುತ್ತವೆ. Bone Elevators (ಅಸ್ಥಿಯ ಚಾಲ

---

* 'ಚಾಲನೇ ಶರಪುಂಖಾಸ್ಯೌ" (ಅ. ಹೃ. ಸೂ. ಅ. ೨೫) ಅರ್ಥಾತ್ ಶರಪುಂಖಾಸ್ಯ (ಶರಪುಂಖ ಮುಖ) ಶಲಾಕೆಗಳು ಎರಡು ಇರುತ್ತವೆ. ಮತ್ತು ಚಾಲನೆಯ ದೆಸೆಯಿಂದ ಪ್ರಯುಕ್ತವಾಗಿವೆ. ವಾಗ್ಭಟದ ಈ ವಚನವಂತೂ ಸುಶ್ರುತೋಕ್ತ ಶರಪುಂಖೀ ಶಲಾಕೆಯ ದೆಸೆಯಿಂದ ಇರುತ್ತದೆ. ಆದರೆ ಈ ಪ್ರಕಾರ ಮತ್ತೊಂದು ಯಂತ್ರದಂತೆ ಪಾತಕ ಎಂಬುದನ್ನೂ ಅವರು ಬರೆದಿದ್ದಾರೆ.

ನಾರ್ಥವಾಗಿ ) Skull Elevator ( ಕಪಾಲ ಚಾಲಕ ) T
Elevator ( ಗಲಗ್ರಂಥಿ "ಟಾಂಸಿಲ"ಯ ದೆಶೆಯಿಂದ ) D
Elevator (ಹಲ್ಲುಗಳನ್ನು ಸಡಿಲಿಸುವದರ ದೆಶೆಯಿಂದ) ಈ ಪ್ರ
ಇರುತ್ತವೆ. §

(೪) ಬಡಿಶಮುಖೀ ಶಲಾಕೆಗಳು (Hooks) "ಬಡಿಶಪ್ರಸಿದ್ಧ
ಬಂಧನಮಿತಿ ಡಲ್ಹಣಃ" ಬಡಿಶ ಬಂಧನವೆಂದರೆ ಮೀನಗಳನ್ನು ಹಿ
ಮುಳ್ಳಿಗೆ (ಕೊಂಡಿಗೆ Fishing hook) ಅನ್ನುತ್ತಾರೆ. ಇದರ ಪ್ರ
ಆಹರಣ (ತೆಗೆಯುವದು ಅಥವಾ ಯಾವದಾದರೂ ಸಿಕ್ಕ ವಸ್ತು
ಮೇಲಕ್ಕೆತ್ತುವದು. To uplift a foreign body) ಇ
ಇವು ಎರಡು ಪ್ರಕಾರದವಿರುತ್ತವೆ.

(೧) ಕಿಂಚಿದಾನತ — ಸ್ವಲ್ಪ ಬಾಗಿದ್ದು (Slightly b
ಅಲ್ಪವಕ್ರ, (೨) ಅತ್ಯಾನತ — ಬಹಳ ಮಣಿದದ್ದು (Well-cur
ಅತಿವಕ್ರ, ಆಧುನಿಕ ವಿಜ್ಞಾನದಲ್ಲಿಯೂ ಇವು ಅನೇಕ ಪ್ರಕಾರ ದ
ತ್ತವೆ. ಉದಾ:— Eye Hook (ಕಣ್ಣಿನ ದೆಶೆಯಿಂದ) Lens H
(ನೇತ್ರತಾಲಗಳನ್ನು ತೆಗೆಯುವದರ ದೆಶೆಯಿಂದ ಮೋತೀಬಿಂದು

---

§ ಶರಪುಂಖಮುಖಂ ದಂತಪಾತನಂ ಚತುರಂಗುಲಮ್ ||
ಅ. ಹೃ ಸೂ ೬

ಅರ್ಥ:- ಶರಪುಂಖಮುಖೀ ಶಲಾಕೆಗಳು ನಾಲ್ಕು ಅಂಗುಲ
ವಿದ್ದು ದಂತಪಾತನಾರ್ಥವಾಗಿರುತ್ತವೆ ವಾಗ್ಭಟರ ಈ ಯಂತ್ರ
ನಿಕ Dental stump Elevator ಸದೃಶವಾಗಿದೆ. ಇದರ
ದಲ್ಲಿ ಅರುಣದತ್ತ ಕೃತ ಟೀಕೆಯನ್ನು ಓದುವುದು ಯೋಗ್ಯವಿದೆ. ಯ
"ಶರೇತಿ ಶರಪುಂಖಾಖ್ಯಂ ಚತುರಂಗುಲಂ ದಂತಪಾತನಂಸ್ಯಾತ್
ಹಿ ದಂತಾಶ್ಚಲಂತಃ ಪಾತ್ಯಂತೆ ಕೃಮ್ಯಾದಿ ಭಕ್ಷಿತಾವಾ"— ಅರ್ಥ
ಪುಂಖ ಯಂತ್ರವು ನಾಲ್ಕು ಅಂಗುಲ ದಂತಪಾತನಾರ್ಥವಾಗಿರುತ್ತದೆ.
ರಿಂದ ಸಡಿಲವಾದ ಅಥವಾ ಕೃಮಿಯಿಂದ ತಿನ್ನಲ್ಪಟ್ಟ ಹಲ್ಲುಗಳನ್ನು
ಅಥವಾ ತೆಗೆಯಲಾಗುತ್ತಿದೆ. ಈ ವಾಕ್ಯದ ತುಲನೆಯನ್ನು
ಆಂಗ್ಲಭಾಷೆಯ ಶಬ್ದದಲ್ಲಿ Elevator— This is a valu

...ರ್ಮದಲ್ಲಿ) Midwifery Hook (ಪ್ರಸವ ಕಾರ್ಯದಲ್ಲಿ*) Tonsil Hook (ಗಲಗ್ರಂಥಿಯನ್ನು ಎತ್ತುವದು ಅಥವಾ ಹೊರಗೆ ತೆಗೆಯುವದರ ...ಶೆಯಿಂದ) ಇತ್ಯಾದಿ. ಇವುಗಳ ಪ್ರಯೋಜನವು ಅವುಗಳ ಹೆಸರಿನಿಂದಲೆ ಪ್ರಸಿದ್ಧವಿದೆ (ಸ್ಪಷ್ಟವಿದೆ).

ಪುನಃ ಇವು Single Hooks (ಏಕಬಡಿಶ–ಒಂದು ಕೊಂಡಿಯು...ಳ್ಳವು) ಮತ್ತು Double Hooks (ದ್ವಿಬಡಿಶ-ಎರಡು ಕೊಂಡಿಯುಳ್ಳವು) ...ೀಗೆ ಎರಡು ಪ್ರಕಾರವಿರುತ್ತವೆ. ಒಂದು ವೇಳೆ (Shaft) ಒಂದೇ ದಂಡದ ಮೇಲೆ ಎರಡು ಕೊಂಡಿಗಳಿದ್ದರೆ ಹೀಗೆ ರಟ್ರೈಕ್ಸರದಲ್ಲಿರುತ್ತದೆ. ಆಗ ಅದಕ್ಕೆ ಡಬಲ್‌ಹುಕ್ (ದ್ವಿಬಿಡಿಶ) ಎಂದೆನ್ನಲಾಗುತ್ತಿದೆ.

---

...instrument; used to remove badly broken or decayed stumps in the lower jaw" (A Guide to Surgical instruments) ಅರ್ಥಾತ್— ಎಲಿವೇಟರ ಒಂದು ಉಪಯೋಗೀ ಯಂತ್ರವಿದೆ. ಇದು ಕೆಟ್ಟ ರೀತಿಯಿಂದ ಮುರಿದ (ದುರ್ಭಗ್ನ) ಅಥವಾ ಕೀಟಾದಿಗಳಿಂದ ತಿಂದ (ಕೊಳೆತ) ಹಲ್ಲುಗಳನ್ನು (ಕೆಳದವಡೆಯ) ತೆಗೆಯುವ ಕೆಲಸದಲ್ಲಿ ಬರುತ್ತವೆ.

* "ಆಹಾರ್ಯೆ ಬಡಿಶಾಕೃತೀ ॥೨೯॥ [ಅ. ಹೃ ಸೂ. ಅ ೨೫] ಬಡಿಶಾಕಾರದ ಎರಡು ಶಲಾಕೆಗಳು ಆಹರಣಾರ್ಥವಾಗಿ ಪ್ರಯುಕ್ತವಾಗುತ್ತವೆ. "ಆಹಾರ್ಯ ಆಕರ್ಷಣೆ ಬಡಿಶಾಕಾರೌ" ಇತಿ ಅರುಣದತ್ತಃ॥

ಬಡಿಶಯಂತ್ರದ ಪ್ರಸಂಗ ವಶದಿಂದ ಶ್ರೀ ವಾಗ್ಭಟರು ಗರ್ಭಶಂಕುದ ವರ್ಣನೆಯನ್ನು ಮಾಡಿದ್ದಾರೆ. ಹೀಗೆ— "ನತೋಗ್ರೇಶಂಕುನಾ ತುಲ್ಯೋ ಗರ್ಭಶಂಕುರಿತಿಸ್ಮೃತ ॥೩೦॥ ಅಷ್ಟಾಂಗುಲಾಯತಸ್ತೇನ ಮೂಢಗರ್ಭಂ ಹರೇತ್ ಸ್ತ್ರಿಯಾಃ ॥೩೧॥ (ಅ ಹೃ. ಸೂ. ಅ. ೨೫) ಅರ್ಥ — ಮುಂದುಗಡೆ ಮಣಿದ (ವಕ್ರಾಗ್ರ) ಶಂಕು (Hook) ಗಳ ಸಮಾನ ಗರ್ಭಶಂಕು ಎನ್ನುತ್ತಾರೆ. ೮ ಅಂಗುಲ (ಅಥವಾ ಅಷ್ಟಾದಶಾಂಗುಲ ಇತಿ ಪಾಠಾಂತರಮ್) ಉದ್ದ, ಇದರಿಂದ ಮೃತ ಅಥವಾ ಮೂಢಗರ್ಭವನ್ನು ಎಳೆದು ಹೊರಗೆ ತೆಗೆಯಲಾಗುತ್ತಿದೆ. ಇದಕ್ಕೆ ಈಗಿನ ಪ್ರಸವಯಂತ್ರ

ಬಡಿಶ ಯಂತ್ರಗಳು ಸ್ಥೂಲಮುಖ ಉಳ್ಳವು (Blunt ಬೇಕೆಂಬುದು ನೆನಪಿನಲ್ಲಿಡತಕ್ಕದ್ದೆಂದು ಆಗಿದೆ. §

(೫) ಮಸೂರದಲ ಮೂತ್ರಮುಖದ್ವೈ — ಮಸೂರದಲ (ಶಲಾಕೆಗಳು)* ಎರಡು ಇರುತ್ತವೆ. ಇವುಗಳ ಅಗ್ರಭಾಗವು ಸ್ವಲ್ಪ ದದ್ದು ಇರುತ್ತದೆ. ಇದು ಕರ್ಣನಾಸಾಮುಖ ಮೊದಲಾದವುಗಳ ಸ್ಸುಗಳ ಶಲ್ಯ (ಮಲ- ಕೀಟಾದಿ) ಗಳ ಆಹರಣಾರ್ಥವಾಗಿ ವಾಗಿರುತ್ತವೆ. ಇವೂ ಸಹ ಒಂದು ತರಹದ Scooped prob ತ್ತವೆ. ತಾಲಯಂತ್ರ (Scoop) ಗಳಲ್ಲಿ ಮುಖವು ಸ್ವಲ್ಪ ಆಳವಾ ಮತ್ತು ಮಸೂರದಲ ಮುಖದಲ್ಲಿ ಅಗ್ರಭಾಗವು ಹಲಚೆಯಾ ನಾವು ಕೆಲವು ನಾವಲಿಗರಲ್ಲಿ ಈ ಪ್ರಕಾರದ ನಖ ಯಂತ್ರಗಳನ್ನು ದ್ದೇವೆ- ಯಾವುದರ ಒಂದು ತುದಿಯ (ಸಿರೆಯು) ನಖವನ್ನು

---

(Midwifery instruments) ಗಳಲ್ಲಿ Blunt Hook Crochet ಎನ್ನುತ್ತಾರೆ. ಮತ್ತು ಎರಡನೇ ತುದಿಗೆ Crochet ತಿಯ ಸೂಜಿಯಂತಿರುವದರಿಂದ) ಎನ್ನುತ್ತಾರೆ. ಮೂಢ ಅಥವಾ ವಾದ (ಗರ್ಭದಲ್ಲಿಯೇ ಮೃತವಾದ) ಕೂಸಿನ ಕಪಾಲಗಳನ್ನು ಭಿನ್ನ ಗರ್ಭ ಶಂಕುವಿನಿಂದ ಅದನ್ನು ಹೊರಗೆ ಎಳೆದುಕೊಳ್ಳಲಾಗುತ್ತದೆ.

§ ಈ ಪ್ರಸಂಗದಲ್ಲಿ "ಅಶ್ಮರ್ಯ್ಯಾಹರಣೆ ಸರ್ಪಫಣಾವದ್ವಕ್ತ್ರ ಎಂದು ವಾಗ್ಭಟರು ಅಶ್ಮರೀ ಶಂಕುಗಳ ವರ್ಣನೆಯ ಉಲ್ಲೇಖವನ್ನು ದ್ದಾರೆ. ಅವುಗಳ ಮುಖವು (ಅಗ್ರಭಾಗವು) ಸರ್ಪಫಣೆಯಂತೆ ಇರ ನಾವು ತಾಲಯಂತ್ರಗಳಲ್ಲಿ ಅಶ್ಮರೀ ನಿಷ್ಕಾಸನ ಯಂತ್ರವನ್ನೂ ದ್ದೇವೆ. ಇದೂ ಸಹ ಅಲ್ಲಿ ಕೆಲಸ ಕೊಡುತ್ತದೆ. ( ಅ ಮುಂದೆ ಹೇಳುತ್ತೇವೆ ) ಈ ಪ್ರಕಾರವಾಗಿ ವಾಗ್ಭಟರು ಶಂಕುಗಳೆಂದು ಒಪ್ಪಿದ್ದಾರೆ. ಹೇಗೆಂದರೆ "ಶಂಕವಃ ಷಟ್" (ಅ. ಹೃ ಇವುಗಳಲ್ಲಿ ಎರಡು ಅಹಿಫಣಾ, ಎರಡು ಬಡಿಶ, ೧ ಗರ್ಭಶಂಕು ೧ ಅಶ್ಮರೀ ಶಂಕು ಈ ಪ್ರಕಾರ ೬ ಎಂದು ಸಂಖ್ಯೆ ಪೂರ್ತಿಗೊಳಿಸಿದ್ದಾ

* "ಸ್ರೋತೋಭ್ಯಃ ಶಲ್ಯಹಾರಿಣೀ| ಮಸೂರದಲವಕ್ತ್ರೆ ದ್ವೆ ಮಷ್ಟನವಾಂಗುಲೆ ||೨೮|| ( ಅ. ಹೃ. ಸೂ. ಅ. ೨೫ )

ದರ ದೆಶೆಯಿಂದ ಇರುತ್ತದೆ. ಮತ್ತು ಮತ್ತೊಂದು ತುದಿಯು ಮಸೂರ ದಲದಂತೆ ದುಂಡಗಾಗಿ ಕರ್ಣ ಶೋಧನಾರ್ಥವಾಗಿ ಇರುತ್ತದೆ. ಒಂದೇ ಯಂತ್ರವು ಉಭಯಾರ್ಥಕಾರಿಣೀ (ಎರಡು ಕೆಲಸಗಳನ್ನು ಮಾಡುವಂಥದು) ಇರುತ್ತದೆ.

(೬) ಷಟ್ ಕಾರ್ಪಾಸ ಕೃತೋಷ್ಣೀಷಾಣಿ— "ತೂಲವೇಷ್ಟಿತಾ ಗ್ರಾಣಿ" (ಡಲ್ಹಣಃ) ಅರ್ಥಾತ್ ಯಾವದರ ಅಗ್ರಭಾಗ ಅಥವಾ ಸಿರೆಯ ಮೇಲೆ ಅರಳೆಯ ತುಂಡು (Swab) ಹತ್ತಿಕೊಂಡಿರುತ್ತದೋ ಅದಕ್ಕೆ ಅರಳೆ ಅಥವಾ ತೂಲ ಶಲಾಕಾಗಳು (Swab probes) ಎಂದೆನ್ನುತ್ತಾರೆ. ಉಷ್ಣೀಷವೆಂದು ಪಗಡಿ (Turban)ಗೆ ಎನ್ನುತ್ತಾರೆ. ಇದರಂತೆ ಅರಳೆಯು ಶಲಾಕಾಗಳ ಸಿರೆಗಳ ಮೇಲೆ ಹತ್ತಿಕೊಂಡಿರುತ್ತದೆ. ಕೊರಳಲ್ಲಿ ಕಫ ಚ್ಚುವ ಅಥವಾ ಕರ್ಣ ಶೋಧನಾರ್ಥವಾಗಿ ಅವುಗಳ ಉಪಯೋಗವಾಗುತ್ತದೆ ಇವುಗಳ ಉದ್ದಳತೆಯು ಸ್ಥಾನಾನುಸಾರವಾಗಿ ಭಿನ್ನ ಭಿನ್ನವಾಗಿರುತ್ತದೆ. ಇವುಗಳ ಕ್ರಿಯೆಯು ಪ್ರಮಾರ್ಜನ ವಾಪ್ರೋಂಛನ (ಒರೆಸುವದು) ವಿರುತ್ತದೆ. ವಾಗ್ಭಟಕಾರರ ಮತವನ್ನು ಕೆಳಗೆ ನೋಡಿರಿ. ಅವರು ಈ ೬ ಶಲಾಕಾ (Long probes) ಗಳನ್ನು ಪುನಃ ೩ ಭಾಗಗಳಲ್ಲಿ ಬೇರ್ಪಡಿಸಿದ್ದಾರೆ. †

---

ಸ್ರೋತಸ್ಸುಗಳಲ್ಲಿಯ ಶಲ್ಯಾಹರಣಾರ್ಥವಾಗಿ ಎರಡು ಶಲಾಕೆಗಳು ೮ ಮತ್ತು ೯ ಅಂಗುಲ ಉದ್ದವುಳ್ಳವಿರುತ್ತವೆ. ಮಸೂರದಲದ (ಚನ್ನಂಗಿ ಬೇಳೆಯ) ಕಾಳುಗಳಂತೆ ಇವುಗಳ ಮುಖವಿರುತ್ತದೆ. ಆದ್ದರಿಂದ ಅವುಗಳಿಗೆ ಮಸೂರದಲ ಮುಖೀ ಶಲಾಕೆಗಳೆಂದೆನ್ನುತ್ತಾರೆ. ಪ್ರಮಾಣ :— "ಮಸೂರದಲಮಿವ ವಕ್ತ್ರಂ ಯಯೋಸ್ತೇ ಮಸೂರದಲ ಮುಖೆ" (ಇತಿ ಅರುಣದತ್ತಃ) ಇದರ ಮತ್ತೊಂದು ರೂಪಾಂತರವನ್ನು ವಾಗ್ಭಟಕಾರರು ಮಾಡಿದ್ದಾರೆ — " ಕರ್ಣಶೋಧನಮಶ್ವತ್ಥಪತ್ರಪ್ರಾಂತಂಸ್ರುವಾನನಂ ||೩೪|| (ಅ. ಹೃ. ಸೂ. ಅ. ೨೫) ಚಕ್ರದತ್ತನೂ ಇದರ ವರ್ಣನೆಯನ್ನು ಮಾಡಿದ್ದಾನೆ. ಹೇಗೆಂದರೆ— "ಕ್ಲೇದಯಿತ್ವಾ ತು ತೈಲೇನ ಸ್ವೇದೇನ ಪ್ರವಿಲಾಪ್ಯಚ| ಶೋಧಯೇತ್ ಕರ್ಣಗೂಥಂತು ಭಿಷಕ್ ಸಮ್ಯಕ್ ಶಲಾಕಯಾ||" (ಚಕ್ರದತ್ತಃ ಕರ್ಣರೋಗೇ)

(೨) ಖಲ್ಲಮುಖೀಶಲಾಕೆಗಳು. ( Spoon- shaped
ಇವು ೩ ಇರುತ್ತವೆ * ಆಕೃತಿಯು ಚಮಚೆ (Spoon) ಯಂ
ತ್ತದೆ. ಕ್ಷಾರ, ತೈಲ ಇತ್ಯಾದಿಗಳನ್ನು ಕರ್ಣ, ನಾಸಾದಿಗಳಲ್ಲಿ
ದಕ್ಕೆ ಇರುತ್ತದೆ. ಇದಕ್ಕೆ ಸಂಣಸೌಟು ಅಥವಾ ಚಮಚೆ ಅಥವಾ
Medicine spoon ಎಂದು ತಿಳಿಯತಕ್ಕದ್ದು. ಒಂದು Ca
spoon ವೂ ಸಹ ಈಗ ಲಿಂಗನಾಶ (ಮೋತೀಬಿಂದು) ದ
(Lens) ವನ್ನು ತೆಗೆಯುವ ಕೆಲಸಕ್ಕೆ ಬರುತ್ತದೆ. ಕ್ಷಾರ (Ca
ಆಮ್ಲ (Acid) ಅಥವಾ ಮುಲಾಮು ಹಚ್ಚುವದಕ್ಕೆ ಈಗ ಒಂದು
ದಂಡವು ( Glass probe ) ವ್ಯವಹರಿಸಲ್ಪಡುತ್ತದೆ.
ಔಷಧಿಗಳಲ್ಲಿ ಮುಳುಗಿಸುವದರಿಂದ ಆದರ ತನುಮಾತ್ರೆಯು (

---

† 'ಕಾರ್ಪಾಸ ವಿಹಿತೋಷ್ಣೀಷಾಃ ಶಲಾಕಾಃ ಷಟ್ ಪ್ರಮಾ
ಪಾಯಾವಾಸನ್ನದೂರಾರ್ಥೇ ದ್ವೇ ದಶದ್ವಾದಶಾಂಗುಲೆ ॥೩॥
ಸಪ್ತಾಂಗುಲೆ ಘ್ರಾಣೇ ದ್ವೇ ಕರ್ಣ್ಯಷ್ಟ ನವಾಂಗುಲೇ (ಅ. ಹೃ
ಅ. ೨೫) ೬ ಶಲಾಕೆಗಳು ಹೀಗಿವೆ- ಅವುಗಳ ಸಿರೆಯು ( ಸಿರೋ
ಅರಳೆಯಿಂದ ಸುತ್ತಲ್ಪಟ್ಟಿರುತ್ತದೆ. ಇವುಗಳಲ್ಲಿ ಎರಡು ಗುದದ
ಒಂದು ಆಸನ್ನ (ಸಮೀಪವರ್ತೀ) ಶಲ್ಯದ ದೆಶೆಯಿಂದ ಮತ್ತು
ನೇದು (ಗುದದಲ್ಲಿ) ದೂರವರ್ತೀ ಶಲ್ಯದ ದೆಶೆಯಿಂದ. ಇವು ಕ್ರಮ
೧೦ ಮತ್ತು ೧೨ ಅಂಗುಲ ಉದ್ದವಾಗಿರುತ್ತವೆ ಎರಡು (ಘ್ರಾಣ)
ದೆಶೆಯಿಂದ ೬ ಮತ್ತು ೭ ಅಂಗುಲ, ಎರಡು ಕರ್ಣದ ದೆಶೆಯಿಂದ
೯ ಅಂಗುಲ, ಇದರ ಮುಂದೆ "ಕರ್ಣಶೋಧನಮಿತ್ಯಾದಿ" ಪಾಠ
ಇದನ್ನು ನಾವು ಹಿಂಡೆಯೇ ಹೇಳಿದ್ದೇವೆ. ಬೇರೆ ಬೇರೆ ಪ್ರಕಾರ
ಡೆರಡು ಪ್ರಮಾಣಗಳು ಕೊಟ್ಟವೆ ಸಣ್ಣದು ಸದೋಪಸ್ಥಾನ
ಹುಡುಗರ ದೆಶೆಯಿಂದ ಮತ್ತು ದೊಡ್ಡದು ಪ್ರೌಢರ ದೆಶೆಯಿಂದ ಇ
ಸಾಧಾರಣವಾಗಿ ಅಥವಾ ಲೋಹ ಶಲಾಕೆಯ ಅಭಾವದಲ್ಲಿ ಕಡ್ಡಿ
ಬಿದಿರು ಮೊದಲಾದವುಗಳ ಉಪಯೋಗವು ಇರುತ್ತದೆ. ಇದಕ್ಕೆ
ಭಾಷೆಯಲ್ಲಿ ಕೂಕಣಿಯ ಕಡ್ಡಿಯನ್ನುತ್ತಾರೆ ಮತ್ತು ಉಪಯೋಗಿಸು

ಮಾತ್ರ ಹತ್ತಿಕೊಳ್ಳುತ್ತದೆ. ಇದರಿಂದ ಅತಿಯೋಗದ ಭಯವಿರುವದಿಲ್ಲ. ಲಾದಿಗಳ ಪ್ರಯೋಗದ ದೆಶೆಯಿಂದ ಚಹದ ಅಥವಾ ಸಂಣ ಚಮಚೆ (Tea spoon) ಯೂ ಸಹ ವ್ಯವಹರಿಸಲಿಕ್ಕೆ ಬರುತ್ತದೆ.

೮) ಅಗ್ನಿ ಶಲಾಕೆಗಳು§—(Cautery probes) ಅರ್ಶ (Piles) ದುಷ್ಟ ವ್ರಣ (Foul ulcers) ಅರ್ಶಕೀಲ, ಅರ್ಬುದಾದಿಗಳನ್ನು ಸುಡುವದಕ್ಕೆ, ಪ್ರಾಚೀನ ಕಾಲದಲ್ಲಿ ಅಗ್ನಿಕರ್ಮದ (Couttery) ಪ್ರಯೋಗವನ್ನು ಮಾಡುತ್ತಿದ್ದರು. (ನೋಡಿರಿ ಸು. ಸೂ. ಅ. ೧೨) ಇದೇ ಅರ್ಥವನ್ನು ಸುಶ್ರುತರು ೬ ಶಲಾಕಾಗಳೆಂದು ಹೇಳಿದ್ದಾರೆ. " ತ್ರೀಣಿ ಜಾಂಬವವದನಾನಿ, ತ್ರೀಣಿ ಅಂಕುಶವದನಾನಿ ಷಡೇವಾಗ್ನಿಕರ್ಮಸು ಅಭಿಪ್ರೇತಾನಿ" - ಇವು ಪುನಃ ಎರಡುಪ್ರಕಾರದವಿವೆ. (ಕ) ಜಾಂಬವ ಮುಖೀ (Bulbous cautery probes) "ಜಾಂಬವ ಫಲಮುಖಾ ಕೃತೀನಿ" (ಇತಿ ಡಲ್ಹಣಃ) ಅರ್ಥಾತ್ ಯಾವು ನೇರಿಲ ಹಣ್ಣಿನ ಸದೃಶ ತತ್ರಿಯ ಆಕಾರ (Bulb like) ದಂತಿರುತ್ತವೆ. ಮತ್ತು ಅಂಕುಶ ಮುಖ, (Hook like) ಅಂಕುಶದಂತೆ ಸ್ವಲ್ಪ ಮಣಿದವು ಇರುತ್ತವೆ. ಇದರ ಹಸ್ತಗ್ರಹವು ಕಟ್ಟಿಗೆಯ ಅಥವಾ ಕಾಜಿನದು ಇರತಕ್ಕದು. ಅನ್ಯಥಾ ಲೋಹವಾಗಿದ್ದರೆ ಕಾಯಿದು ಪ್ರಯೋಗ ಮಾಡುವವನ ಕೈಯನ್ನು ಸುಟ್ಟುಬಿಡಬಹುದು. ಇತ್ತೀಚೆಗೆ ಅಗ್ನಿ ಕರ್ಮದ ದೆಶೆಯಿಂದ ಪ್ಲೆಟಿನಮ್

---

† ಈ ವಿಷಯದಲ್ಲಿ ವಾಗ್ಭಟರ ಮತವು ಹೀಗಿದೆ:- "ಅಷ್ಟಾಂಗುಲಾ ನಿಮ್ನಮುಖಾಸ್ತಿಸ್ರಃ ಕ್ಷಾರೌಷಧಕ್ರಮೆ । ಕನೀನೀಮಧ್ಯಮಾನಾಮೀ ನಖಮಾನಸಮೈರ್ಮುಖೈಃ ॥೩೭॥ (ಅ. ಹೃ. ಸೂ. ೨೫) ಅರ್ಥ- ಎಂಟು ಅಂಗುಲ ಉದ್ದ, ಕೆಳಮುಖವಾಗಿ (ಗಂಭೀರ-deep), ಕನಿಷ್ಟ (ಎಲ್ಲವುಗಳಕ್ಕಿಂತ ಸಂಣ ಬೆರಳು-Little finger), ಅನಾಮಿಕಾ (ಉಂಗುರ ಬೆರಳು–Ring finger), ಮತ್ತು ಮಧ್ಯಮಾ (Middle finger) ಬೆರಳುಗಳ ನಖ (Nails) ಗಳ ಆಕಾರ ಅಥವಾ ಪ್ರಮಾಣದ ಮುಖ (ಅಗ್ರಭಾಗ) ವಾಗಿರತಕ್ಕದು. ಅವುಗಳಕಾರ್ಯವು ಕ್ಷಾರ, ಔಷಧಾದಿಗಳ ಪ್ರಣಿಧಾನ (ಹಚ್ಚುವದು) ಮಾಡುವದಿದೆ. ಸುಶ್ರುತದಕಿಂತಲೂ ಈ ವರ್ಣನೆಯು ಹೆಚ್ಚು ಸ್ಪಷ್ಟವಿದೆ.

Platinum wire (ತಂತಿ)ಗಳ ಉಪಯೋಗವನ್ನು ಮಾಡಲಾ
ಈ ತಂತಿಗಳು ಕಾಜಿನದಂಡದಲ್ಲಿ ಹತ್ತಿಕೊಂಡಿರುತ್ತವೆ ಮತ್ತು
ವಾಗಿದ್ದುದರಿಂದ ಇದರ ಆಕೃತಿಯು (ಗೋಲಾಕಾರ ಇತ್ಯಾದಿ
ಬದಲವಾಗುತ್ತದೆ. ಇದನ್ನು ಕಾಜಿನ ದಂಡದಿಂದ ಹಿಡಿದು ಮತ್ತು
ಅಂತಿಮ ಶಿರೋಭಾಗವನ್ನು ಮದ್ಯಸಾರ ಪ್ರದೀಪ (Spirit
ದ ಜ್ವಾಲೆಯಲ್ಲಿಟ್ಟು ಯಾವಾಗ ಆ ತಂತಿಯು ಕೆಂಪಗೆ ರಕ್ತವ
ತ್ತಿದೆಯೋ ಆದನ್ನು ತೆಗೆದು ಅರ್ಶ ಇತ್ಯಾದಿಗಳ ದಹನ
ಪ್ರಯೋಗ ಮಾಡಲು ಬರುತ್ತದೆ. ಈಗ ಡಾಕ್ಟರ ಜನರು

---

* "ಶಲಾಕಾಜಾಂಬವೋಷ್ಠಾನಾಂ ಕ್ಷಾರೇಽಗ್ನೌ ಚ
ತ್ರಯಂ| ಯುಂಜ್ಯಾತ್ ಸ್ಥೂಲಾಣುದೀರ್ಘಾಣಾಮ್" (ಅ. ಹೃ
ಅ. ೨೬) ಕ್ಷಾರ ಮತ್ತು ಅಗ್ನಿ ಕರ್ಮದಲ್ಲಿ ಬೇರೆ ಬೇರೆ ಸ್ಥೂಲ,
ಮತ್ತು ದೀರ್ಘಶಲಾಕೆಗಳು ಮತ್ತು ಜಾಂಬವೋಷ್ಠ ಯಂತ್ರಗಳ
ವನ್ನು ಮಾಡತಕ್ಕದ್ದು. ಹೀಗೆ ವಾಗ್ಭಟರು ಈ ಶ್ಲೋಕದಲ್ಲಿ ಆರು
ಗಳು ಮತ್ತು ೬ ಜಾಂಬವೋಷ್ಠಗಳ ವರ್ಣನೆಯನ್ನು ಮಾಡಿದ್ದಾರೆ
ಗಳಲ್ಲಿ ೩-೩ ಕ್ಷಾರಕರ್ಮದಲ್ಲಿ ಮತ್ತು ೩-೩ ಅಗ್ನಿ ಕರ್ಮದಲ್ಲಿ
ಸಿವೆ. ಇವುಗಳ ಹೊರತಾಗಿ ಇನ್ನೂ ಮತ್ತೊಂದು ಅರ್ಧೇಂದು
ಶಲಾಕೆಯು (Half moon-like rod)ವರ್ಣನೆಯನ್ನು ಮಾಡಿ
ಅದು ಅಂತ್ರವೃದ್ಧಿಯ ಸುಡುವ ಕೆಲಸಕ್ಕೆ ಪ್ರಯುಕ್ತವಾಗಿದೆ "ಶ
ಮಂತ್ರ ವರ್ತ್ಮನಿ| ಮಧ್ಯೋರ್ಧ್ವ ವೃತ್ತ ದಂಡಾಂಚ ಮೂಲೆ ಚಾರ್ಧೇ
ಸನ್ನಿಭಾಮ್ ||೩೫|| (ಅ. ಹೃ. ಸೂ ೨೬) ಅರ್ಥ— ಒಂದು ಶಲಾ
ಅಂತ್ರವೃದ್ಧಿ (Hernia) ಯಲ್ಲಿ ಪ್ರಯೋಗ ಮಾಡತಕ್ಕುದು
ಮೂಲದಲ್ಲಿ ಅರ್ಧ ಚಂದ್ರಾಕಾರವಾಗಿ ಮತ್ತು ಅದರ ಹಿಡಿಕೆಯು
ದಿಂದ ಮೇಲ್ಗಡೆಗೆ ವೃತ್ತ (ಗೋಲಾಕಾರ) ವಾಗಿರುತ್ತದೆ. ಪ್ರಸಂ
ದಿಂದ ಈ ಶಲಾಕೆಯೂ ಸಹ ದಹನ ಕ್ರಿಯೆಯ ದೆಶೆಯಿಂದ ಉಪಯೋ
ಬೀಳುತ್ತದೆ. ಅರ್ಧಚಂದ್ರ ದಂಡ ಯಂತ್ರಗಳೂ ಸಹ ಪ್ರಯುಕ್ತವಾ
ಬರುತ್ತವೆ. ಪಶುಗಳಿಗೆ ಅದರಿಂದ ಬರೆಯನ್ನು ಅಥವಾ ಗುದ

ಪ್ರಕಾಶ) ಧಾತೆ (Electric current) ಯ ದ್ವಾರದಿಂದ ಪ್ಲೆಟಿನಮ್ ತಂತಿಯನ್ನು ಬಿಸಿಮಾಡಿ ಉಪಯೋಗಮಾಡುತ್ತಾರೆ. ಇದಕ್ಕೆ Electric Cautery[ವಿದ್ಯುದಗ್ನಿ ಕರ್ಮ]ವೆನ್ನುತ್ತಾರೆ. ಇಲ್ಲಿ ಪ್ಲೈಟಿನಮ್ ತಂತಿಯ ಒಂದು ಸಿರೋ ಭಾಗವು ಕಾಜಿನ ನಳಿಕೆಯಲ್ಲಿ ಹಾಯ್ದು ಹೋಗುತ್ತದೆ. ಎರಡನೇತಂತಿಯು ವಿದ್ಯುದ್ಯಂತ್ರದಿಂದ ಜೋಡಿಸಲ್ಪಟ್ಟಿರುತ್ತದೆ. ಜಾಂಬವ ಮುಖಗಳು ೩ ಪ್ರಕಾರಗಳಾಗಿರುತ್ತವೆ. ಅರ್ಥಾತ್ ಸ್ಥೂಲ, ಮಧ್ಯ, ಮತ್ತು ತೀಕ್ಷ್ಣ. ಮತ್ತು ಅಂಕುಶಮುಖಗಳು ೩ ಪ್ರಕಾರವಿವೆ. ಬೃಹದ್, ಮಧ್ಯ, ಹ್ರಸ್ವಾಕಾರ ಈ ಪ್ರಕಾರವಿರುತ್ತವೆ. ಇವುಗಳ ಹಸ್ತಗ್ರಹವಾದರೂ ಸುಖಾ ಯೋಗ್ಯವಾಗಿ ಉದ್ದಳತೆಯುಳ್ಳವಿರುತ್ತವೆ.

(೯) ನಾಸಾರ್ಬುದೀ ಶಲಾಕೆ § ಇದು ಸುಶ್ರುತರ ಅನುಸಾರವಾಗಿ ಬದರಾಸ್ಥಿದಲ (ಬೋರೆಯ ಬೀಜದ ಆಕಾರ) ಸದೃಶ, ಮತ್ತು ತಗ್ಗುಳ್ಳವು ಮತ್ತು ತೀಕ್ಷ್ಣ ತುದಿಯುಳ್ಳವು ಇರತಕ್ಕದ್ದು. ಅರ್ಥಾತ್ ಶಲಾಕಾ ದಂಡ ಅಥವಾ Handle ದ ಮುಂದೆ ಒಂದು ಸಣ್ಣ ಸೌಟಿನಂತೆ ಸ್ಥೂಲ ವಾಗಿರತಕ್ಕದು. ಅದರಿಂದ ನಾಸಾರ್ಬುದವನ್ನು ಕತ್ತರಿಸಿ ತೆಗೆಯಲಾಗುತ್ತದೆ. "ತೀಕ್ಷ್ಣೋಷ್ಠ" ಶಬ್ದದಿಂದ ಇದನ್ನು ಶಸ್ತ್ರಗಳ ಶ್ರೇಣಿಯಲ್ಲಿ ಎಣಿಸಬೇಕಿತ್ತು. ಯಂತ್ರಗಳಂತೂ ಸ್ಥೂಲ ಮುಖ (Blunt) ವಾಗಿರುತ್ತವೆ. ಎಷ್ಟೋ ಜ್ಞಾನಿಗಳು ಇದಕ್ಕೆ Nasal curette (ನೇಜಲ ಕ್ಯುರಿಟ) ಇದು ಅಶುದ್ಧವಾಗಿದೆ- ಹಸ್ತಗ್ರಹದಲ್ಲಿ ಮುಂದೆ ಸ್ಥೂಲಶಲಾಕಾ ಸಂಗಡ ಕ್ಯೂರಿಟ (Curette) ಹತ್ತಿರುತ್ತದೆ. ಈ ಶಸ್ತ್ರವು Adenoids ಕೊರ

---

ಮಾಡುವದಕ್ಕೆ ಈಗ ಉಪಯೋಗಿಸುತ್ತಾರೆ. ದಂಡವು ಇಲ್ಲಿ ಕಟ್ಟಿಗೆಯದು ಮತ್ತು ಅರ್ಧೇಂದುವು ಕಬ್ಬಿಣದ್ದಿರುತ್ತದೆ. ಕೆಲವರಮತದಲ್ಲಿ ಇದು Truss ಇರುತ್ತದೆ. ಅದನ್ನು ಅಂತ್ರವೃದ್ಧಿಯಲ್ಲಿ ಟೊಂಕದ ಮೇಲೆ ಕಟ್ಟಲಾಗುತ್ತದೆ. ಪರಂತು ಇಲ್ಲಿ ಕ್ಷಾರ ಮತ್ತು ಅಗ್ನಿಕರ್ಮದ ಪ್ರಸಂಗವಿರುತ್ತದೆ. ಸುಶ್ರುತ — ಚಿ. ಅ. ೧೯ ರಲ್ಲಿ "ವಂಕ್ಷಣಸ್ಥಾಂತಾಂದಹೇದರ್ಧೇಂದುವಕ್ರಯಾ" ಈ ವಚನದಿಂದ ದಹನದ ಸ್ಪಷ್ಟ ಪ್ರಮಾಣವು ದೊರೆಯುತ್ತದೆ.

§ "ಕೋಲಾಸ್ಥಿದಲತುಲ್ಯಾಸ್ಯಾನ್ನಾಸಾರ್ಶೋಽರ್ಬುದದಾಹಕೃತ್ ॥೩೭॥ [ಅ. ಹೃ. ಸೂ. ಅ. ೨೫] ಆ ಶಲಾಕೆಯ ಆಸ್ಯವು [ಮುಖವು] ಕೋಲಾಸ್ಥಿಖಂಡ [ಬಾರಿಹಣ್ಣಿನ ಬೀಜದ ಅರ್ಧಭಾಗ] ದಂತೆ

ಳಲ್ಲಿ ಮೇಲಗಡೆಗೆ ಗಲಶುಂಡೀ (Uvula–ಕಾಕ) ಹಿಂದೆ ಶ್ವಾಸ
ವನ್ನು ಅವರೋಧ ಮಾಡುವ ಸಂಣ ಗ್ರಂಥಿಗಳಂತಿರುತ್ತವೆ.
ಸುವ ಕೆಲಸಕ್ಕೆ ಬರುತ್ತವೆ. ಇದನ್ನು ಮುಖದಲ್ಲಿ ಹಾಕಿಕೊಂಡು
(Pharynx) ಒಳಗಡೆಗೆ ಅಗ್ರಭಾಗವನ್ನು ಮೇಲೆ ಮಾಡಿ ಗ್ರ
(Adenoids) ನ್ನು ಕತ್ತರಿಸಲಾಗುತ್ತಿದೆ. ಈ ಕಾರಣದಿಂದ
Adenoid curette ಎಂದೂ ಅನ್ನುತ್ತಾರೆ. ಇಲ್ಲಿ ನಾಸಾ
ಅಭಿಪ್ರಾಯವು Nasal Polypus ಇರುತ್ತದೆ ಮೂಗಿನ
ಅಸ್ಥಿಯಮೇಲೆ ಅರ್ಬುದದಂತೆ ವೃದ್ಧಿ (Growth) ಯಂತೆ
ಇದು ಬಹುಶಃ ಪೀನಸ (ಪಿನಸಿ) ದಲ್ಲಿ ಆಗುತ್ತದೆ. ಇವನ್ನು ಕತ್ತ
ಇತ್ತೀಚಿಗೆ Nasal Polypus snare ಎಂಬುವ ಶಸ್ತ್ರದ ಉಪ
ವಾಗುತ್ತದೆ. ಇದರಲ್ಲಿ ಹಸ್ತಗ್ರಹ (Handle) ದ ಮುಂದೆ
ತಂತಿಯು ಹತ್ತಿಕೊಂಡಿರುತ್ತದೆ. ಇದಕ್ಕೆ ಅರ್ಬುದದ ಮೂಲದಲ್ಲಿ
ಅದನ್ನು ಬೇರೆ ಮಾಡಲಾಗುತ್ತಿದೆ. ಇದಾದರೂ ಶಸ್ತ್ರವಿದೆ. ಪ್ರಸ
ದಿಂದ Curette ಮತ್ತು Snare ಎರಡೂ ಇಲ್ಲಿ ವರ್ಣನಮಾಡ

(೧೦) ಅಂಜನ ಶಲಾಕಾ (Eye-rod) ಇದು ಕಣ್ಣುಗಳಲ್ಲಿ
(ಕಾಡಿಗೆ-Collyrium) ಹಚ್ಚುವ ಸಾಧಾರಣವಾದ ಶಲಾಕೆಯು
ಇದಕ್ಕೆ ಸುರಮಾಂಚಾಂ ಎನ್ನುತ್ತಾರೆ. ಇದು ಪ್ರಾಯಃ ಗೋಲ
ಪರಂತು ಮಧ್ಯದಲ್ಲಿ ಸ್ವಲ್ಪ ದಪ್ಪವಾದದ್ದು ಅಥವಾ ಚತುಷ್ಕೋ
ರುತ್ತದೆ. ಎರಡೂ ಸಿರೋಭಾಗಗಳು ಪುಷ್ಪ ಮುಕುಲ (ಹೂವಿನ
ದಂತೆ ಸ್ಥೂಲ ಮತ್ತು ಮಸೃಣ [ಮೃದು] ಇರತಕ್ಕದು. ಯಾ
ಕಂಣುಗಳಿಗೆ ಧಕ್ಕೆಯಾಗಬಾರದು. ಈ ಶಲಾಕಾಗಳು ತಾಮ್ರ
[ಸತುವು] ಹಿತ್ತಾಳಿ ಸೀಸದವು ಮತ್ತು ಜರ್ಮನ್ ಸಿಲವರ ಧಾತು
ಇರುತ್ತವೆ. ಸಣ್ಣವೂ ಮತ್ತು ದೊಡ್ಡವೂ ಇರುತ್ತವೆ. ಯಾವು

---

ಇರುತ್ತದೆ. ನಾಸಾರ್ಶ [ಮೂಗಿನ ಒಳಗೆ ಕಾಳು ಅಥವಾ ಮಾಂಸಾ
ಮತ್ತು ನಾಸಾರ್ಬುದ [Polypus or tumour in the nose]
ದಹನಾರ್ಥ [ಸುಡುವದಕ್ಕೆ] ಪ್ರಯುಕ್ತವಾಗಿವೆ. ಸುಶ್ರುತರು ಈ
ಕ್ರಿಯೆಯ ದೆಶೆಯಿಂದ ಬರೆದಿರುವದಿಲ್ಲ. ಇಲ್ಲಿ ಇಬ್ಬರ ಮತಭೇದವಿದ್ದ

ರೋಗಾನುಸಾರವಾಗಿ ವ್ಯವಹಾರ ಮಾಡಲ್ಪಡುತ್ತವೆ. ಹೇಗೆಂದರೆ "ಪ್ರಶಸ್ತಾ ಲೇಖನೇ ತಾಮ್ರೀ ರೋಪಣೇ ಕಾಲಲೋಹಜಾ" (ಚಕ್ರದತ್ತಃ) ಏವಂ " ತಾಮ್ರ ಲೋಹಾಶ್ಮಸಂಜಾತಾ ಶಲಾಕಾ ಲೇಖನೇ ಮತಾ । ಸುವರ್ಣ ರಜತೋದ್ಭೂತಾ ಶಲಾಕಾ ಸ್ನೇಹನೇ ಮತಾ ॥೭೨॥ ಅಂಗುಲೀಚ ಮೃದುತ್ವೇನ ಕಥಿತಾ ರೋಪಣೇ ಬುಧೈಃ॥ (ಶಾ. ಉತ್ತರಖಂಡೆ ಅ. ೧೩) ಇತ್ಯಾದಿ ಪ್ರಮಾಣಗಳಿಂದಲೂ ಸ್ಪಷ್ಟವಿರುತ್ತದೆ.

(೧೧) ಮೂತ್ರಮಾರ್ಗ ಶೋಧನೀ ಶಲಾಕೆಯು (Urethral Bougie)- ಇದು ಸುಶ್ರುತದ ಅನುಸಾರವಾಗಿ ಮಾಲತೀಪುಷ್ಪ (ಮಲ್ಲಿಗಿ) ದ ಹೂವಿನ ನಾಳದ ಸದೃಶವಾಗಿ ತೆಳ್ಳಗಾಗಿ ಮತ್ತು ದುಂಡಗಾಗಿರತಕ್ಕದ್ದು. ಇದರ ಪ್ರಯೋಜನವು ಮೂತ್ರ ಮಾರ್ಗದ (Urethra) ಶೋಧನವಿರುತ್ತದೆ. ಪೂಯಮೇಹ [ಉಷ್ಣವಾತ] ಇತ್ಯಾದಿ ರೋಗಗಳ ಕಾರಣದಿಂದ ಒಮ್ಮೊಮ್ಮೆ ಮೂತ್ರ ಮಾರ್ಗವು ಹತ್ತಿಯಾಗಿ ಅಥವಾ ಮುಚ್ಚಿ ಬಿಡುತ್ತದೆ. ಇದರಿಂದ ಮೂತ್ರಕೃಚ್ಛ್ರ ಇತ್ಯಾದಿಗಳು ಉದ್ಭವಿಸಿ ರೋಗಿಗೆ ಬಹಳ ಕಷ್ಟವನ್ನು ಕೊಡುತ್ತವೆ. ಇದಕ್ಕೆ ಅಂಗ್ರೇಜಿಯಲ್ಲಿ Stricture of the Urethra ಎನ್ನುತ್ತಾರೆ. ಇದರ ನಿವೃತ್ತಿಯ ದೆಶೆಯಿಂದ ಮೂತ್ರಮಾರ್ಗವನ್ನು ಹೇಳಿದ ಶಲಾಕಾ (Bougie-ಬೂಜೀ) ಯಿಂದ ತೆರವು (Dilate) ಮಾಡಲಾಗುತ್ತಿದೆ. ಆದ್ದರಿಂದ ಬೂಜಿಯನ್ನು Dilating sound or stricture Bougie ಯೆಂದು ಸಹ ಎನ್ನುತ್ತಾರೆ. ಬೂಜೀ ಒಳಗಿನಿಂದ ಗಗ್ಗಾಗಿರುತ್ತದೆ. ಮುಂದುಗಡೆ ತೆಳ್ಳಗೆ ಮತ್ತು ಹಿಂದುಗಡೆ ಸಾವಕಾಶವಾಗಿ ದಪ್ಪವಾಗಿರುತ್ತದೆ. ಕೊನೆಗೆ ಹಲಚೆ (Disc-like) ಯಾಗಿರುತ್ತದೆ ಅಲ್ಲಿಂದ ಇದನ್ನು ಹಿಡಿದುಕೊಂಡು ಮೂತ್ರ ಮಾರ್ಗದಲ್ಲಿ ಸಾವಕಾಶವಾಗಿ ಪ್ರವೇಶ ಮಾಡಲಾಗುತ್ತದೆ. ಇವು ಭಿನ್ನ ಭಿನ್ನ ಅಂಕೆಗಳುಳ್ಳವಿರುತ್ತವೆ. ಮೇಢ್ರದಲ್ಲಿ ಪ್ರವೇಶ ಮಾಡುವ ಪೂರ್ವದಲ್ಲಿ ಇದನ್ನು ಸ್ನಿಗ್ಧ ಮಾಡಿಕೊಳ್ಳತಕ್ಕದ್ದು. ಮೊದಲು ಸಣ್ಣದಾದ ನಂ. ೪ ರಿಂದ ಆರಂಭ ಮಾಡಿರಿ. ಪುನಃ ಸಾವಕಾಶವಾಗಿ ೨ ರಿಂದ ೧೨ ಅಥವಾ ೧೪ ರ ವರೆಗೆ ಪ್ರಯೋಗ ಮಾಡಿರಿ. ಇದರ ಪ್ರಯೋಗವನ್ನು ಮಾಡುವಾಗ ರೋಗಿಯನ್ನು ಮಲಗಿಸಿ ಮೇಢ್ರವನ್ನು ದೃಢತೆಯಿಂದ ಹಿಡಿದು ಪ್ರಯೋಗಮಾಡತಕ್ಕದ್ದು.

ಮೂತ್ರಾಘಾತ [Retention of urine] ದಲ್ಲಿ ಕೈಥಿಟರ [Catheter]ದ ಪ್ರಯೋಗ ಮಾಡಲಾಗುತ್ತಿದೆ. ಗಡಿಗೆ ಪೊಳ್ಳು [ರಿಕ್ತಗರ್ಭ] ಮತ್ತು ಮುಂದೆ ವಕ್ರ Curved ತ್ತದೆ: ಇದರಲ್ಲಿ ಒಂದು ತಂತಿಯಂತೆ ಹತ್ತಿಕೊಂಡಿರುತ್ತದೆ. ಶೋಧನಾರ್ಥವಾಗಿ ಕೆಲಸಕ್ಕೆ ಬರುತ್ತದೆ. ಇದರ ಅಗ್ರಭಾಗದಲ್ಲಿ ಕಡೆಗೆ ಕಣ್ಣು [ನೇತ್ರವತ್ ಛಿದ್ರ-Eyes] ಗಳಿರುತ್ತವೆ. ಈ ಮೂತ್ರಾಶಯದಲ್ಲಿ ಮುಟ್ಟಿದ ಕೂಡಲೇ ಮೂತ್ರವು ಇದರ ಪ್ರವೇಶವಾಗಿ ನಳಿಕೆಯ ದ್ವಾರದಿಂದ ಹೊರಗೆ ಬರುತ್ತದೆ. ಇವು ಎಷ್ಟೋ ಪ್ರಮಾಣ (sizes) ಗಳುಳ್ಳವಿರುತ್ತವೆ. ಅರ್ಥಾತ್ ನಂ. ೧೫ ರ ವರೆಗೆ ಅವಸ್ಥಾನುಸಾರವಾಗಿ ಪ್ರಯುಕ್ತವಾಗಿರುತ್ತವೆ. ಪುರುಷನಿಗೆ ನಂ. ೧೦ ಪ್ರಾಯಃ ಉಪಯೋಗವಾಗುತ್ತದೆ.

ಪುರುಷರ ದೆಶೆಯಿಂದ ಕೈಥಿಟರ ಉದ್ದ ಮತ್ತು ಸೊಟ್ಟವಾಗಿ ಸ್ತ್ರೀಯರ ದೆಶೆಯಿಂದ ಸಂಣವು ಮತ್ತು ಸರಳ [ಸೀದಾ] ವಾದದ್ದಿ ಇವು ಪುನಃ ಧಾತು ಮತ್ತು ರಬ್ಬರದಿಂದು ಎರಡು ಪ್ರಕಾರದ್ದಿ ಧಾತುಗಳಿಂದ ನಿರ್ಮಿತವಾದದ್ದರ ಪ್ರಯೋಗವು ಸ್ವಲ್ಪ ಕಠಿ ಪರಂತು ರಬ್ಬರದ್ದು ಸುಗಮವಿದೆ.

ಕೆಳಗೆ ಬರೆದ ವರ್ಣನೆಯನ್ನು ನೆನಪಿನಲ್ಲಿಡಿರಿ :—

**CATHETERS:** Are hollow instruments u to withdraw urine from the bladder. There three types of catheters — metal, gum-elastic and rubber ones.

---

† ನಾವು ಇದರ ವರ್ಣನೆಯನ್ನು ಮಾಡಿಲ್ಲ. ಇದು ಪ್ರಯೋಗ ಬಹಳ ಕಡಿಮೆ ಬರುತ್ತದೆ.

* ನಮ್ಮ ವಿಚಾರದಲ್ಲಿ Catheter ವನ್ನು ಮೂತ್ರವಾಹಿನೀ ಎಂದೆನ್ನತಕ್ಕದ್ದು. ಸಂಸ್ಕೃತೋಕ್ತ ಪಾಠದಲ್ಲಿ ಮಾಲತೀಪುಷ್ಪದ ನೇ ಸಚ್ಛಿದ್ರವಾಗಿರುತ್ತದೆ. ಇದರಿಂದ ಮೂತ್ರವಾಹನದಭಾವವು ಸಿದ್ಧವಾಗು

(a) MALE CATHETER * is suitably curved as the urethra. Eyes are large enough, one on either side. There are two rings fixed to the outer end, one on each side. They are used in tying the catheter in the bladder with a tape. sizes vary from No. 4 E to 18 E.

(b) FEMALE CATHETER : Has not got such a well defined curve as in the male. It is shorter.

RUBBER CATHETER : Though hollow throughout, its distal end beyond the eye is solid for easy introduction. Whenever a catheter is used, first always pass a rubber one.

ADVANTAGES : Rubber catheters are easy to pass practically without any complications— no irritability, no bleeding and no false passage.

DISADVANTAGES: (a) Being too flexible they are less easily directed through a stricture.

(b) Repeated boiling destroys the rubber.

ಈ ವಚನಗಳ ಸಂಕ್ಷಿಪ್ತಾರ್ಥವನ್ನು ನಾವು ಮೇಲೆಯೇ ಕೊಟ್ಟಿದ್ದೇವೆ. ವಸ್ತುತಃ ಕೈಥಿಟರವು ನಾಡೀ ಯಂತ್ರಗಳಲ್ಲಿ ಎಣಿಸಲ್ಪಡಬೇಕಾಗುವದು. (Bougie) ತಗ್ಗು ಇದ್ದುದರಿಂದ ಶಲಾಕಾ ಯಂತ್ರವಾಗಿರುತ್ತದೆ.

ಪ್ರಸಂಗವಶಾನುಸಾರವಾಗಿ ( Sound)— ಅಶ್ಮರೀ ಪರೀಕ್ಷಕ ಯಂತ್ರದ ವರ್ಣನೆಯನ್ನು ಮಾಡುವುದೂ ಆವಶ್ಯಕವೆನಿಸುತ್ತಿದೆ. ಈ ಯಂತ್ರವು ಮೂತ್ರಾಶಯಗತ ಅಶ್ಮರೀ ( Bladder stone ) ಗಳ ಶೋಧದ ದೆಶೆಯಿಂದ ಇರುತ್ತದೆ. ಇದು ಧಾತು ಕೃತ (Metallic). ಮತ್ತೊಂದು ಇಂಥದೇ ದಪ್ಪವಾದದ್ದಿರುತ್ತದೆ. ಒಳಗೆಲ್ಲ ಪೊಳ್ಳು ಮತ್ತು

ತೂಕದಲ್ಲಿ ಹಗುರವಾಗಿರುತ್ತದೆ. ಕೈಥಿಟರದಂತೆ ಇವಕ್ಕೆ ಕಣ್ಣುಗಳು ಇರುವದಿಲ್ಲ. ವಕ್ರತೆಯು (curve) ಕಡಿಮೆ ಇರುತ್ತದೆ. ಇ... ಯಲ್ಲಿ ಬಹುಶಃ ಚಕ್ರಿಕಾ (disc) ಇರುತ್ತದೆ. ಅದರ ಮೇಲೆ... ಬರೆಯಲ್ಪಟ್ಟಿರುತ್ತವೆ. ಪರಂತು ಪ್ರದರ್ಶಿಸಿದಂತೆ ಸೌಂಡದ ... ಒಂದು ವರ್ತುಲಾಕಾರದ ರಿಕ್ತಗರ್ಭ ಹಸ್ತಗ್ರಹ (Hollow ... rical Handle) ಇರುತ್ತದೆ. ಇದು ಶಬ್ದ [ಸಪ್ಪಳ] ವನ್ನು ... ಲಿಕ್ಕೆ ಇರುತ್ತದೆ. ಇದರ ಪ್ರಯೋಗವು ಅಶ್ಮರಿಯ ಶೋಧಕ್ಕಾಗಿ ... ರಿಯು ಒಂದು ಇದೆಯೋ ಅಥವಾ ಎರಡು, ಸಂಣದು ಅಥವಾ ... ಇತ್ಯಾದಿ ವಿಷಯಗಳ ಜ್ಞಾನವು ಈ ಸಪ್ಪಳದಿಂದ ಆಗುತ್ತದೆ. ... ಸರಿಯಾದ ಜ್ಞಾನವಾಗದಿದ್ದರೆ X-Ray ಮಾಡುವದು ಉಚಿತ...

STONE SOUND † :— Made of metal ... thickness throughout; the instrument being h... within is light in weight. Has got no eyes ... end like a catheter; curve is shorter also. T... is a sort of mark at the handle to show the d... tion of the beak; sometimes numbers are ma... instead to show the size of the sound. The h... is grooved to facilitate its turning by the fi...

USES:— To detect the presence or abs... of the Stone.

[i] To detect the number of stones-s... or multiple.

[ii] The size of the stone-big or small.

[iii] The density of the stone-soft or har...

[iv] The situation of the stone-encyst... free.

ಇದರ ಸಂಕ್ಷಿಪ್ತ ಆಶಯ [ಸಾರಾಂಶ] ವನ್ನು ಮೇಲೆಯೇ ಕೊಡಲಾಗಿದೆ. ಸೌಂಡು [‡] ಸ್ತ್ರೀಯರ ದೆಶೆಯಿಂದ ಬೇರೆ ಇರುತ್ತದೆ. ಮತ್ತು ಸಂಣದಿರುತ್ತದೆ. ಈ ಯಂತ್ರಗಳ ಸಂಪೂರ್ಣ ಪ್ರಯೋಗ ವಿಧಿಯನ್ನು ಯಾವನಾದರೂ ದಕ್ಷನಾದ ವೈದ್ಯರಿಂದ ಕಲಿತುಕೊಳ್ಳತಕ್ಕದ್ದು. §

## ಉಪಯಂತ್ರಗಳು.

### (Auxiliary or Accessory Instruments)

ಉಪಯಂತ್ರಾಣಿ— ರಜ್ಜುವೇಣಿಕಾಪಟ್ಟ ಚರ್ಮಾಂತರ್ವಲ್ಕಲಲತಾ ವಸ್ತ್ರಾಷ್ಠೀಲಾಶ್ಮಮುದ್ಗರ ಪಾಣಿಪಾದ ತಲಾಂಗುಲಿ ಜಿಹ್ವಾದಂತನಖ ಮುಖ ಬಾಲಾಶ್ವಕಟಕಶಾಖಾಷ್ಠೀವನ ಪ್ರವಾಹಣಹರ್ಷಾಯಸ್ಕಾಂತ ಮಯಾನಿ ಕ್ಷಾರಾಗ್ನಿ ಭೇಷಜಾನಿ ಚೇತಿ ||೧೫|| (ಸು. ಸೂ. ಅ. ೭)

ಉಪಯಂತ್ರ (ಸಹಾಯಕಯಂತ್ರ)ಗಳೂ ೨೫ ಇರುತ್ತವೆ. ಹೇಗೆಂದರೆ: ೧) ರಜ್ಜು, ೨) ವೇಣಿಕಾ, ೩) ಪಟ್ಟ, ೪) ಚರ್ಮ, ೫) ಅಂತರ್ವಲ್ಕಲ, ೬) ಲತಾ, ೭) ವಸ್ತ್ರ, ೮) ಅಷ್ಠೀಲಾಶ್ಮ, ೯) ಮುದ್ಗರ, ೧೦) ಪಾಣಿ ಪಾದತಲ, ೧೧) ಅಂಗುಲಿ, ೧೨) ಜಿಹ್ವಾ, ೧೩) ದಂತ, ೧೪) ನಖ ೧೫) ಮುಖ, ೧೬) ಬಾಲ= (ಕೂದಲು) ೧೭) ಅಶ್ವಕಟಕ, ೧೮) ಶಾಖಾ ೧೯) ಷ್ಠೀವನ, ೨೦) ಪ್ರವಾಹಣ, ೨೧) ಹರ್ಷ, ೨೨) ಅಯಸ್ಕಾಂತ, ೨೩) ಕ್ಷಾರ, ೨೪) ಅಗ್ನಿ ಮತ್ತು ೨೫) ಭೇಷಜ ಈ ಪ್ರಕಾರವಾಗಿ ಉಪಯಂತ್ರಗಳು (ಸಹಾಯಕ) ಅವುಗಳ ಹೆಸರುಗಳಿರುತ್ತವೆ.

'ಏತಾನಿ ದೇಹೇ ಸರ್ವಸ್ಮಿನ್ ದೇಹಸ್ಯಾವಯವೇ ತಥಾ ।
ಸಂಧ್ಯಾಕೋಷ್ಠೇ ಧಮನ್ಯಾಂ ಚ ಯಥಾಯೋಗ್ಯಂ ಪ್ರಯೋಜಯೇತ್ ||೧೬|| (ಸು. ಸೂ. ಅ. ೭)

---

‡ ಸೌಂಡು (Sound) ಇದಕ್ಕೆ ಅಂಗ್ರೇಜಿ ಭಾಷೆಯಲ್ಲಿ ಶಬ್ದವೆನ್ನುತ್ತಾರೆ. ಈ ಯಂತ್ರದ ಹೆಸರು ಸೌಂಡು ಎಂದು ಈ ಕಾರಣದಿಂದಿದೆ– ಯಾವಾಗ ಈ ಯಂತ್ರದ ಮುಂದಿನ ತುದಿಯು ಮೂತ್ರಾಶಯದಲ್ಲಿ ಅಶ್ಮರಿಯ ಸಂಗಡ ತಿಕ್ಕುತ್ತಿರುವದೋ ಆಗ್ಗೆ ಒಂದು ವಿಶೇಷ ಪ್ರಕಾರದ ಟಕ್ ಟಕ್ ಎಂಬ ಶಬ್ದವು [Characteristic click] ಕೇಳಲಾಗುತ್ತಿದೆ.

ಈ ಉಪಯಂತ್ರಗಳು * ಸಮಗ್ರ ದೇಹದಲ್ಲಿ ಮತ್ತು ಶರೀರ ಗಳಲ್ಲಿ ಸಂಧಿ, ಕೋಷ್ಠ, ಮತ್ತು ಧಮನಿಗಳಲ್ಲಿ ಯೋಗ್ಯರೀತಿಯಿಂ ಹರಿಸತಕ್ಕುವು.

ವಕ್ತವ್ಯ:— ಮೇಲೆ ವಿವರಿಸಿದ ೨೫ ವಸ್ತುಗಳು ಉಪ (ಸಹಾಯಕ) ಎಂದೆನ್ನಿಸಿಕೊಳ್ಳುತ್ತವೆ. ಹೇಗೆ ಉಪಪ್ರಧಾನ ಉಪಮಂತ್ರಿ, ಪ್ರಧಾನಮಂತ್ರಿಯ ಸಹಾಯಕವಾಗಿ ಅವನ ಸ್ಥಳದ ಮಾಡುತ್ತಾರೋ ಈ ಉಪಯಂತ್ರಗಳೂ ಸಹ ಯಂತ್ರಗಳ ಸ ವಿದ್ದುದು ಕೆಳಗೆ ಬರೆದ ವಕ್ತವ್ಯದಿಂದ ಸ್ಪಷ್ಟವಿದಿತವಾಗುತ್ತದೆ.

(೧) ರಜ್ಜು:— "ಮುಂಜಾದಿ ವಿರಚಿತೊ ಗುಣಃ" (ಡಲ್ಹಣ) ವಿಗೆ ಮಲಕು, ಹಗ್ಗ ಅಥವಾ ಸೂತ್ರ (ದಾರ) ವೆಂದೆನ್ನುತ್ತಾರೆ. (ನಾರು) ಸಣಬು, ಹತ್ತಿ ಮೊದಲಾದವುಗಳಿಂದ ನಿರ್ಮಿತವಾಗಿ ಸೂತ್ರ (Thread) ದ ಪ್ರಯೋಗವು ಕೇವಲ ವ್ರಣಗಳ (ನೀವನ) ಯುವ (Suturing) ಕೆಲಸದಲ್ಲಿ ಬರುತ್ತದೆ. ಪರಂತು ಅದಕ್ಕೆ ಕ್ಷಾ ಗಳ ಭಾವನೆಯನ್ನು ಕೊಟ್ಟು ಅರ್ಶ, ಭಗಂದರ, ನಾಡೀ ವ್ರಣಾ ಪ್ರಯುಕ್ತ ಮಾಡಲಾಗುತ್ತದೆ. ಹಾಗೂ ಸರ್ಪ ವಿಷದ ವೇ ತಡೆಯಲಿಕ್ಕೆ ಮತ್ತು ಶಸ್ತ್ರಕರ್ಮದ ಸಮಯದಲ್ಲಿ ರೋಗಿಯ ದೇಹ (ಅವಯವಗಳನ್ನು) ಕಟ್ಟಲಿಕ್ಕೂ (Ligature) ಸಹ ದೊಡ್ಡ Rope ಉಪಯೋಗಕ್ಕೆ ಬರುತ್ತದೆ.

(೨) ವೇಣಿಕಾ– (ಹೆರಳು) "ಗುಣತ್ರಯ ಗ್ರಥಿತಾ" (ಇತಿ ಡಲ್ಹ) ಹಗ್ಗವು (Twine, thread, cord) ಇದು ಹಗ್ಗಕ್ಕಿಂತಲೂ ದೃಢವಾಗಿರುತ್ತದೆ. ಪ್ರಯೋಗವು ತದ್ವತ್ (ಹಗ್ಗದ ಪ್ರಯೋಗದಂ) ಪತಂಗದಲ್ಲಿಯೂ (ಗಾಳಿಯ ಪಟದ) ಈ ಹಗ್ಗವೇ ಹತ್ತುವದು.

(೩) ಪಟ್ಟಿ (Silk cloth) ಈ ಪಟ್ಟಿಯು (Bandage) ಯಾವದಾದರೊಂದು ಅವಯವದ ಮೇಲೆ ಸುತ್ತುವ ಕೆಲಸಕ್ಕೆ ವಂಥಹದು. ಆಂಗ್ರೇಜಿಯ ಬೈಂಡೇಜ ಎಂಬ ಶಬ್ದದ ಅಪಭ್ರಂಶವಿ

§ ವಾಗ್ಭಟಕಾರರು ಸೂ. ಅ. ೨೫ ರಲ್ಲಿ " ಸ್ವಂ ಸ್ವಮ ಯಂತ್ರಾಣಿ ಮೇಢ್ರಶುದ್ಧ್ಯಂಜನಾದಿಷು" ||೧೮|| ಈ ವಚನವನ್ನು ಈ ವಿಷಯದ ಸಮಾಪ್ತಿ ಮಾಡಿದ್ದಾರೆ.

॥ ಹರಿಃ ಓಂ ॥

"ದಧ್ಯಙಹ ಯನ್ಮಧ್ವಾಥರ್ವಣೋವಾಮಶ್ವಸ್ಯ ಶೀರ್ಷ್ಣಾಪ್ರಯದೀಮುವಾಚ। ಎಂಬ ಋಗ್ವೇದ ಮಂತ್ರದಲ್ಲಿಯ ಋಚೆಯಿಂದ ಸಿದ್ಧವಾಗುವದೆಂದರೆ:— ಋಗ್ವೇದದ ೧ನೆಯ ಮಂಡಲದಲ್ಲಿ ೧೧೬ ನೆಯ ಸೂಕ್ತದಲ್ಲಿ ೧೨ನೆಯ ಋಚೆಯಲ್ಲಿ ಅಥರ್ವಕುಲೋತ್ಪನ್ನನಾದ"ದಧ್ಯಙ" ಎಂಬವನಿಗೆ ಇಂದ್ರನು "ಪ್ರವರ್ಗ್ಯವಿದ್ಯೆ'' ಮತ್ತು "ಮಧು ವಿದ್ಯೆ'' ಗಳನ್ನು ಕಲಿಸಿ ಈವಿದ್ಯೆಯನ್ನು ಯಾರಿಗೂ ಹೇಳಕೂಡದು ಎಂದು ಕಟ್ಟಪ್ಪಣೆಯಿತ್ತನು. ಒಂದು ವೇಳೆ ಇದನ್ನು ಹೇಳಿದ್ದಾದರೆ ಶಿರಚ್ಛೇದ ಮಾಡಲಾದೀತೆಂದೂ ಆಜ್ಞಾಪಿಸಿದನು. ಅಶ್ವಿನೀ ದೇವತೆಗಳು ಈ ಪ್ರವರ್ಗ್ಯವಿದ್ಯಾ ಮತ್ತು ಮಧುವಿದ್ಯೆಯನ್ನು ಕಲಿಯಬೇಕಾಗಿತ್ತು. ಅವರು ದಧ್ಯಙನಿಗೆ ಆಶ್ವಾಸನ ಕೊಟ್ಟು ಮೊದಲು ಆತನ ಶಿರಚ್ಛೇದ ಮಾಡಿ ಅದಕ್ಕೊಂದು ಕುದುರೆಯ ಶಿರವನ್ನು ಜೋಡಿಸಿ ಅದರಿಂದ ಆ ವಿದ್ಯೆಗಳನ್ನು ಹೇಳಿಸಿಕೊಂಡರು. ಇಂದ್ರನು ಬಂದು ದಧ್ಯಙ ಋಷಿಯ ಆ ಅಶ್ವಶಿರವನ್ನು ಕಡಿದು ಹಾಕಿದನು. ಬಳಿಕ ಅಶ್ವಿನೀ ದೇವತೆಗಳು ಬಂದು ದಧ್ಯಙನ ಮೊದಲಿನ ಶಿರವನ್ನು ಜೋಡಿಸಿ ಪೂರ್ವವತ್ ಆತನನ್ನು ಸರಿಪಡಿಸಿದರು. ಇದು ಸಾಮಾನ್ಯವಾದಕೆಲಸವಲ್ಲ. ಇದನ್ನು ವೈದ್ಯರು ಹಸ್ತಗತ ಮಾಡಿಕೊಳ್ಳುವರೇ ? ಅಶ್ವಿನೀ ದೇವತೆಗಳು ಅವಳಿ ಜವಳಿ ಬಂಧುಗಳು. ಮೊದಲು ಒಬ್ಬನು ತನ್ನ ತಮ್ಮನ ಶಿರಚ್ಛೇದವನ್ನು ಮಾಡಿ ಮತ್ತೆ ಜೋಡಿಸಿ ತೋರಿಸಿದನು ಬಳಿಕ ತಮ್ಮನು ತನ್ನ ಅಣ್ಣನ ಶಿರಚ್ಛೇದವನ್ನು ಮಾಡಿ ಮತ್ತೆ ಜೋಡಿಸಿ ದಧ್ಯಙನಿಗೆ ತೋರಿಸಿದನು. ಈ ರೀತಿ ಉಭಯ ಬಂಧುಗಳ ಕೌಶಲ್ಯವನ್ನು ನೋಡಿ ದಧ್ಯಙನಿಗೆ ವಿಶ್ವಾಸವುಂಟಾಯಿತು. ಇಂಥ ಮಹತ್ತರವಾದ ಶಿರಃ ಸಂಧಾನವಿದ್ಯೆಯು ಪ್ರಜಾಪತಿಯಿಂದ ಅಶ್ವಿನಿಗಳಿಗೆ ಪ್ರಾಪ್ತವಾಗಿತ್ತು.



॥ ಹರಿಃ ಓಮ್ ॥

ಚರಿತ್ರಂಹಿ ವೇರಿವಾಚ್ಛೇದಿ ಪರ್ಣಮಾಜಾ ಖೇಲಸ್ಯ ಪರೀತಕ್ಮ್ಯಾಯಾಮ್ । ಸದ್ಯೋಜಂಘಾಮಾಯಸೀಂ ವಿಶ್ಪಲಾಯೈಧನೇಹಿತೇ ಸರ್ತವೇಪ್ರತ್ಯಧತ್ತಮ್॥ (ಋಗ್ವೇದ ಸಂಹಿತೆಯ ೧ನೆಯ ಮಂಡಲದಲ್ಲಿ ೧೧೬ನೆಯ ಸೂಕ್ತದಲ್ಲಿ ೧೫ನೆಯ ಋಚೆಯು)

ಹಾರಾಡುವ ಪಕ್ಷಿಯ ರೆಕ್ಕೆ ಕಡಿದಂತೆ ಖೇಲನೆಂಬ ರಾಜನ ಹೆಂಡತಿಯಾದ ವಿಶ್ಪಲೆಯ, ಒಂದು ಕಾಲು ಯುದ್ಧದಲ್ಲಿ ಕಡಿದು ಹೋಗಲು ಅಶ್ವಿನೀ ದೇವತೆಗಳು ವಿಶ್ಪಲೆಗೆ ಕಬ್ಬಿಣದಿಂದ ಕಾಲಿನ ಅವಯುವವನ್ನು ಮಾಡಿಕೊಟ್ಟು ಪುನಃ ಅವಳನ್ನು ಯುದ್ಧಕ್ಕೆ ಉದ್ಯುಕ್ತಳನ್ನಾಗಿ ಮಾಡಿದರು. ಅರ್ಥಾತ್ ಕಬ್ಬಿಣದ ಅವಯುವಗಳನ್ನು ಮಾಡುವ ವಿದ್ಯೆ ಹಾಗೂ ಕಡಿದ ಭಾಗ ಕೂಡಲೆ ವೇದನಾರಹಿತವನ್ನಾಗಿ ಮಾಡಿ ಮಾಯಿಸಿ ನಿತ್ಯವೂ ವ್ಯವಹಾರೋಪಯೋಗಿಯನ್ನಾಗಿ ಮಾಡುವ ಕಲೆಯು ಅಶ್ವಿನೀ ದೇವತೆಗಳಲ್ಲಿತ್ತು; ಶಸ್ತ್ರ ಕರ್ಮ ಮಾಡುವದಲ್ಲದೆ ಅದನ್ನು ಮಾಯಿಸಿ ಅಂಥದೇ ಆದ ಅವರವರ ಶರೀರಕ್ಕೆ ತಕ್ಕ ಉಪಯುಕ್ತ ಅವಯುವವನ್ನು ಮಾಡುವದು ಕೂಡ ಆ ಒಂದು ಕಾಲದಲ್ಲಿ ನಮ್ಮಲ್ಲಿಯೇ ಇತ್ತೆಂದು ಸಿದ್ಧವಾಗುತ್ತದೆ. ಆದ್ದರಿಂದ ವೈದ್ಯರು ಇಂಥ ವಿದ್ಯೆಯನ್ನು ಹಸ್ತಗತ ಮಾಡಿಕೊಳ್ಳಬೇಕು.

---

॥ ಹರಿಃ ಓಂ ॥

ಯಾಭಿಃ ಶಚೀಭಿರ್ವೃಷಣಾಪರಾವೃಜಂ ಪ್ರಾಂಧಂ ಶ್ರೋಣಂಚಕ್ಷಸ ಎತವೇ ಕೃಥಃ ॥

ಪರಾವೃಜನಿಗೆ ಅಂಧತ್ವ ಮತ್ತು ಪಂಗುತ್ವವೂ ಬಂದಿತ್ತು. ಇವನ ಅಂಧತ್ವನನ್ನು ಶಸ್ತ್ರಕರ್ಮ ಮಾಡಿ ದೃಷ್ಟಿಯನ್ನುಂಟು ಮಾಡಿದರು. ಮತ್ತು ಅವನ ಕುಂಟುತನವನ್ನೂ ನಿವಾರಣೆಗೊಳಿಸಿದರು. ಮೇಲ್ಕಾಣಿಸಿದ ಋಗ್ವೇದ ಅಷ್ಟಕ ೧ ಅಧ್ಯಾಯ ೭ ವರ್ಗ ೩೪ನೇದರಲ್ಲಿಯ ೮ನೆಯ ಋಚಿ ಯಲ್ಲಿಯ ಅರ್ಥ ಋಚಿಯ ಅರ್ಥವಿದು. ಇದರಿಂದ ಕಣ್ಣು ಕೊಟ್ಟರು, ಪಂಗುತ್ವವನ್ನು ನಿವಾರಿಸಿದರು ಎಂಬ ವಿಷಯವು ಔಷಧಿಚಿಕಿತ್ಸೆಯಿಂದಲೋ ಕನ್ನಡಕದಿಂದಲೋ ಅಥವಾ ಶಸ್ತ್ರ ಕರ್ಮದಿಂದಲೋ ಎಂಬದು ವಿಚಾ ರಾರ್ಹ ಪ್ರಶ್ನೆಯಾಗಿದೆ. ಅದರಂತೆ ಪಂಗುತ್ವವನ್ನಾದರೂ ಔಷಧೀ ಚಿಕಿತ್ಸೆ ಯಿಂದಲೋ, ಕುಬಡಿಗಳನ್ನು ಕಂಕುಳದಲ್ಲಿಟ್ಟುಕೊಳ್ಳುವಂತೆಯೋ ಅಥವಾ ಕಾಲಿನ ಅವಯುವಗಳನ್ನು ಕೊಟ್ಟರೋ ಏನೆಂಬುದು ಸ್ಪಷ್ಟವಿಲ್ಲ. ಅಂಧತ್ವ, ಪಂಗುತ್ವಗಳು ಶಸ್ತ್ರ ಕರ್ಮದ ಕೆಲಸಗಳೆಂದು ಪ್ರತೀತಿಯಿದೆ. ಬಹು ಜನ ವಿದ್ವಾಂಸರ ತರ್ಕವಾದರೂ ಶಸ್ತ್ರ ಕರ್ಮ ನೈಪುಣ್ಯತೆಯದೆಂದೇ ಇರುವದು. ವೇದಕಾಲದಲ್ಲಿಯ ಜನರಿಗೆ ಶಸ್ತ್ರ ಕರ್ಮ ಅಥವಾ ಔಷಧೀ ಪ್ರಯೋಗಗಳು ಆಗುತ್ತಿದ್ದರೂ ಅಂಥ ಜನರು ತೀರ ವಿರಳವೆಂದೇ ಸಿದ್ಧವಾಗುವದು. ಆರೋಗ್ಯ ಭಾಗ್ಯವು ದೇವಲೋಕದಲ್ಲಿಯ ಸೊತ್ತಾಗಿತ್ತು.

॥ ಶಂ ಓಮ್ ॥

ತ್ರಿರ್ನೋ ಅಶ್ವಿನಾದಿವ್ಯಾನೀ ಭೇಷಜಾತ್ರಿಃ ಪಾರ್ಥಿವಾನಿ ತ್ರಿರೂದತ್ತ ಮದ್ಭ್ಯಃ । ಓಮಾನಂಶಂಯೋರ್ಮಮಕಾಯಸೂನವೇ ತ್ರಿಧಾತು ಶರ್ಮ ವಹತುಂ ಶುಭಸ್ಪತೀ ॥

ಹೇ ಅಶ್ವಿನಿ ದೇವತೆಗಳೇ; ತಾವು ನಮಗೆ ಮೂರು ಸಾರೆಯೂ ದಿವ್ಯವಾದ ಹಾಗೂ ಪಾರ್ಥಿವ ಔಷಧಿಗಳನ್ನು ದಯಪಾಲಿಸಿರಿ (ಕೊಡಿರಿ). ಮತ್ತು ಮೂರು ಸಾರೆಯೂ ಅಂತರಿಕ್ಷದೊಳಗಿನ ಔಷಧಿಗಳನ್ನು ಕೊಡಿರಿ. ಶುಭಾಧಿಪತಿಗಳಾದ ತಾವು "ಶಂಯೂ" ಎಂಬವನಿಗೆ ಕೊಟ್ಟ ಪ್ರಸಾದದ ಮೂರುಪಟ್ಟು ಪ್ರಸಾದವನ್ನು ನನ್ನ ಮಕ್ಕಳಿಗೆ ಕೊಡುವದಕ್ಕಾಗಿ ಆಗಮಿಸಿರಿ.

ದೇವತೆಗಳ ವೈದ್ಯರಾದ ಅಶ್ವಿನೀ ಬಂಧುಗಳನ್ನು ಕುರಿತು ಪ್ರಾರ್ಥಿಸಿಕೊಂಡ ಈ ಮಂತ್ರದಲ್ಲಿ ಕಿಂಬಹುನಾ ಇಡೀ ಋಗ್ವೇದ ಸಂಹಿತೆಯಲ್ಲಿದ್ದ ಪ್ರಾರ್ಥನಾ ರೂಪಗಳಾದ ಮಂತ್ರದಲ್ಲಿ ಕೇವಲ ಒಂದೆರಡು ಮಾತ್ರ ಶಸ್ತ್ರ ಕರ್ಮ ಪ್ರಧಾನಗಳುಳ್ಳ ಮಂತ್ರಗಳ ಹೊರತು ಉಳಿದವುಗಳೆಲ್ಲವೂ ಔಷಧಿ ಚಿಕಿತ್ಸೆಯುಳ್ಳವುಗಳಾಗಿವೆ. "ಋಗ್ವೇದಸ್ಯೋಪವೇದಃ ಆಯುರ್ವೇದಃ" ಎಂದು ಹೇಳುವಾಗ ಅಲ್ಲಿ ಕೇವಲ ಔಷಧೀ ಚಿಕಿತ್ಸೆಯೇ ಪ್ರಾಧಾನ್ಯವಾಗಿರುತ್ತೆಂದು ಹೇಳಬಹುದು. ಆದ್ದರಿಂದ ಶಸ್ತ್ರ ಚಿಕಿತ್ಸೆಯು ಗೌಣವೆಂದೂ ಮತ್ತು ಅದು ಅಧಮಪಕ್ಷದ್ದೆಂಬೂ ಅರಿತುಕೊಳ್ಳಬೇಕು. "ಅಧಮಃ ಶಸ್ತ್ರದಾಹಾಭ್ಯಾಮ್"

ಮೇಲೆ ಬರೆದ ಪ್ರಾರ್ಥನಾ ಮಂತ್ರವು ಅಶ್ವಿನೀ ದೇವತೆಗಳ ಸ್ತುತಿಪರವಾಗಿದೆ. ಈ ಮಂತ್ರದಲ್ಲಿ ಶಸ್ತ್ರ ಕರ್ಮ ವಿಷಯವಿಲ್ಲ. ಅವರಲ್ಲಿದ್ದ ಶಸ್ತ್ರ ಕರ್ಮವನ್ನು ಪ್ರಾರ್ಥಿಸಿ ಬೇಡಿಕೊಂಡದ್ದು ಕಂಡು ಬರುವದಿಲ್ಲ. ಔಷಧಿಗಳನ್ನು ಮಾತ್ರ ಹಲವು ಕಡೆ ಪ್ರಾರ್ಥಿಸಿಕೊಂಡದ್ದುಂಟು.

---

(೪) ಚರ್ಮ (Leather.) ಇದಾದರೂ ಅವಯುವಗಳನ್ನು ಕಟ್ಟಲಿಕ್ಕೆ ಹೇಗೆ ಸರ್ಪವಿಷ ಅಥವಾ ಜಲೋದರದಲ್ಲಿ ನೀರನ್ನು ತೆಗೆದ ಬಳಿಕ ಹೊಟ್ಟೆಯ ಮೇಲೆ ಅದನ್ನು ಸುತ್ತುತ್ತಾರೆ, ಹಾಗೆಯೇ ಗುದ ಭ್ರಂಶಿಗುದಂ ಸ್ವಿನ್ನಂ ಸ್ನೇಹಾಭ್ಯಕ್ತಂ ಪ್ರವೇಶಯೇತ್। ಕಾರಯೇತ್ ಗೋಫಣಾಬಂಧಂ ಮಧ್ಯಛಿದ್ರೇಣ ಚರ್ಮಣಾ" ॥ (ಸುಶ್ರುತ) ಗುದಭ್ರಂಶದಲ್ಲಿ ಗೋಫಣ ಬಂಧವು। ಚರ್ಮದ್ದೇ ಇರುತ್ತದೆ. ಈಗೂ ಸಹ ಶಸ್ತ್ರಕರ್ಮ ಮಾಡುವ ಸಮಯದಲ್ಲಿ ರೋಗಿಗೆ (Leather straps) ದಿಂದ ವಶಮಾಡಿಕೊಳ್ಳಲಾಗುತ್ತಿದೆ. ಶಸ್ತ್ರಕೋಶ (Instrument box) ಇತ್ಯಾದಿಗಳ ನಿರ್ಮಾಣದಲ್ಲಿಯೂ ಕೆಲಸ ಕೊಡುತ್ತದೆ. ಗೋಫಣ ಇತ್ಯಾದಿಗಳನ್ನು ಕಟ್ಟುವ ವ್ಯಾಖ್ಯೆಯನ್ನು ಚಿತ್ರಸಹಿತವಾಗಿ ಮೇರಠ ನಿವಾಸಿಗಳಾದ ಪಂ. ಶ್ರೀ ಗಣೇಶದತ್ತ ವೈದ್ಯರ ಪುಸ್ತಕದಲ್ಲಿ ನೋಡತಕ್ಕುದು ಆಗಿದೆ.

ಅಂತರ್ವಲ್ಕಲ (Inner bark of a tree.) "ವಲ್ಕಲಂ ಪಲಾಶೋದುಂಬರಾದೀನಾಂತ್ವಕ್, ಸಾ ಚ ಭಗ್ನಾದಿಬಂಧನಯಂತ್ರಾರ್ಥಮ್" (ಡಲ್ಹಣಃ) ಪಲಾಶ (ಮುತ್ತಲ) ಇತ್ಯಾದಿ ಗಿಡಗಳ ಒಳಗಿನ ಚಕ್ಕೆಯು। ಯಾವದು ಮೃದು ಮತ್ತು ಸರಳವಾಗಿರುತ್ತದೆಯೋ, ಭಗ್ನ (Fracture) ಇತ್ಯಾದಿಗಳ ಬಂಧನ ಮತ್ತು ನಿಯಂತ್ರಣಾರ್ಥ ಕೆಲಸಕ್ಕೆ ಬರುತ್ತದೆ. ಈಗಾದರೂ ಇದೇ ಪ್ರಯೋಜನದ ದೆಶೆಯಿಂದ(Splints) ಕುಶಗಳ ವ್ಯವಹಾರವಾಗುತ್ತದೆ. ಇದರ ವರ್ಣನೆಯನ್ನು ಪೂರ್ವೋಕ್ತ ಪುಸ್ತಕದಲ್ಲಿ ಮತ್ತು ಸುಶ್ರುತದಲ್ಲಿ ನೋಡತಕ್ಕುದು. ಕೆಲವು ಕಡೆಗೆ 'ಚರ್ಮಾಂತರ್ವಲ್ಕಲ'ವೆಂದು ಪಾಠವುದೊರೆಯುತ್ತಿದೆ. ಆಗ ಚರ್ಮಾಂತ ಮತ್ತು ವಲ್ಕಲವೆಂದು ಹೀಗೆ ಅರ್ಥ ಮಾಡಬೇಕು. ಚರ್ಮಾಂತದ ಪ್ರಯೋಜನವು ಚರ್ಮದಿಂದಲೇ ಸಿದ್ಧವಾಗುತ್ತದೆ. ಮತ್ತು ವಲ್ಕಲದಿಂದ ಅಂತರ್ವಲ್ಕಲವನ್ನೂ ತಿಳಿಯತಕ್ಕುದು.

---

† ವಾಗ್ಭಟರು ಉಪಯಂತ್ರಗಳಿಗೆ ಅನುಯಂತ್ರ ಎಂಬ ಹೆಸರು ಕೊಟ್ಟಿದ್ದಾರೆ ಆದರೆ ಅವರು ಸುಶ್ರುತೋಕ್ತ ಕೆಲವು ಯಂತ್ರಗಳನ್ನು ಬಿಟ್ಟಿದ್ದಾರೆ. ಮತ್ತು ಕೆಲವು ಹೊಸವನ್ನು ಬರೆದಿದ್ದಾರೆ. "ಅನುಯಂತ್ರಾಣ್ಯಯಸ್ಕಾಂತ ರಜ್ಜುವಸ್ತ್ರಾಶ್ಮಮುದ್ಗರಾಃ ॥ ಪಟ್ಟಾಂತರ್ಜಿಹ್ವಾಬಾಲಾಶ್ಚ ಶಾಖಾನಖಮುಖ ದ್ವಿಜಾಃ ॥೩॥ ಕಾಲಃ ಪಾಕಃ ಕರಃ ಪಾದೋಭಯಂ

(೬) ಲತಾ (Creeper, twine) ಅಮೃತ ಮೊದಲಾದ
('ಪ್ರತಾನಿನೀ ವೇಲಾ; ಇತಿ ಡಲ್ಹಣಃ) ಯಿಂ ಸಹ ರಜ್ಜು (ಹಗ್ಗ)
ಬಂಧನಾರ್ಥವಾಗಿ ಕೆಲಸಕ್ಕೆ ಬರುತ್ತದೆ. ಕೆಲವು ವೇಳೆ ಅಕಸ್ಮ
ಸರ್ಪ ಕಚ್ಚಿದ ಕಾಲಕ್ಕೆ ಮೇಲೇರುವ ವಿಷವನ್ನು ತಡೆಯಲಿಕ್ಕೆ (ರಜ್ಜು
ಮೊದಲಾದವು ಸಿಗದಿದ್ದಾಗ ಇಂಥ ಬಳ್ಳಿಗಳಿಂದಲೇ ಬಂಧನ (Ligat
ಕಟ್ಟುವದನ್ನು) ವನ್ನು ಮಾಡಲು ಬರುತ್ತದೆ.

---

ಹರ್ಷಶ್ಚ ತತ್ ಕ್ರಿಯಾಃ। ಉಪಾಯವಿತ್ ಪ್ರವಿಭಜೇದಾಲೋಚ್ಯನಿಪು
ಧಿಯಾ" ॥೪೦॥ (ಅ. ಹೃ. ಸೂ. ಅ. ೨೫) ಅರ್ಥಾತ್ ಅನುಯ
(Supplementary Instruments – ಅನುಗಾಮೀ ಯಂ
ಅಯಸ್ಕಾಂತ, ರಜ್ಜು, ವಸ್ತ್ರ, ಅಶ್ಮ, ಮುದ್ಗರ, ಪಟ್ಟ, ಆಂತ್ರ (ಅಂತ್ರ
ಜಿಹ್ವಾ, ಬಾಲ (ಕೂದಲು), ಶಾಖಾ, ನಖ, ಮುಖ, ದ್ವಿಜ (ಹಲ್ಲು
ಕಾಲ, ಪಾಕ, ಕರ, ಪಾದ, ಭಯ ಮತ್ತು ಹರ್ಷ ಈ ಪ್ರಕಾರ ೧೯ ನ
ಉಪಾಯವನ್ನರಿತ ವೈದ್ಯನು ಬುದ್ಧಿಯಿಂದ ಅವುಗಳ ಕ್ರಿಯೆಗಳನ್ನು ಚೆನ್ನಾ
ವಿಚಾರ ಮಾಡಿ ವಿಭಾಗಿಸತಕ್ಕದು. (ಅಥವಾ ಉಪಯೋಗಿಸತಕ್ಕ
ವಾಗ್ಭಟರು 'ವೇಣಿಕಾ, ಅಂತರ್ವಲ್ಕಲ, ಲತಾ, ಅಂಗುಲಿ', ಅಶ್ವಕ
ಷ್ಠೀವನ, ಪ್ರವಾಹಣ, ಕ್ಷಾರ, ಅಗ್ನಿ ಮತ್ತು ಭೇಷಜ ಈ ೧೦ ಸು
ತೋಕ್ತ ಉಪಾಯಗಳನ್ನು ಬಿಟ್ಟು ಬಿಟ್ಟಿದ್ದಾರೆ. ಮತ್ತು ನಾಲ್ಕು ಹೊ
ಅನುಯಂತ್ರ—ಆಂತ್ರ, ಕಾಲ, ಪಾಕ ಮತ್ತು ಭಯ ಇವುಗಳ ವರ್ಣ
ಯನ್ನು ಮಾಡಿದ್ದಾರೆ. ಅವುಗಳ ಉಪಯೋಗವು ಇಂತಿದೆ :—

೧ ಆಂತ್ರ— "ಅಂತ್ರಂ ಮೇಷಾದಿನಾಂ ಶುಷ್ಕಾಂತ್ರ ವಿಃಶಿಷ್ಟ
ಶಸ್ತ್ರಭೇದಾನಂತರಂ ಸೂಕ್ಷ್ಮಸಿರಾ ಬಂಧನಾದಿಷು ಯುಜ್ಯತೇ"। (ವಾ
ಟಾರ್ಥ ಕೌಮುದೀ) ಅರ್ಥ— ಮೇಷ (ಕುರಿ) ಅಜ (ಆಡು) ಇತ್ಯಾ
ಗಳ ಒಣಗಿದ ಆಂತ್ರ [ಕರಳು] Dried Intestines] ಕ್ಕೆ 'ಅಂತ್ರ
ವೆನ್ನುತ್ತಾರೆ. ಇದು ಭೇದನದ ನಂತರ ಸೂಕ್ಷ್ಮ ಶಿರಾಗಳ ಬಂಧ
[Ligature] ದ ದೆಶೆಯಿಂದ ಕೆಲಸಕ್ಕೆ ಬರುತ್ತದೆ. ವಾಗ್ಭಟರಕಿಂತಲು
ಯಾವ ಆಚಾರ್ಯರೂ ಆಂತ್ರದ ಹೆಸರನ್ನು ಕೊಟ್ಟಿರುವದಿಲ್ಲ. ಇದು ಬುದ್ಧ
ಕಾಲದ [ಆವಿಷ್ಕಾರ] ಸಂಶೋಧನೆ ಎಂದು ತಿಳಿಯತಕ್ಕದು. ಇದು ಈ

(೭) ವಸ್ತ್ರ (Cotton cloth.) ಕರ್ಪಟ (ಬಟ್ಟೆ) ಪಟ್ಟಿಗಳನ್ನು ಮಾಡುವ ಮತ್ತು ವಕ್ಷ (ಎದೆ) ಉದರ ಇತ್ಯಾದಿಗಳ ಮೇಲೆ ಕಟ್ಟಲಿಕ್ಕೆ ಉಪಯೋಗಿಯಾಗಿದೆ. ತನುವಸ್ತ್ರ (Lint gauze) (ತೆಳ್ಳಗಿನ ಬಟ್ಟೆ) ವನ್ನು ತೈಲ ಇತ್ಯಾದಿಗಳಿಂದ ತೋಯಿಸಿ ವ್ರಣಗಳ ಮೇಲೆ (For dre-) ssings) ಕಟ್ಟಲಾಗುತ್ತಿದೆ. ಪಟ್ಟಿಯ ಚರ್ಮಾದಿಗಳಂತೆಯೇ ಇದರ ಉಪಯೋಗವೆಂದು ತಿಳಿಯತಕ್ಕದ್ದು.

(೮) ಅಷ್ಠೀಲಾಶ್ಮ ("ದೀರ್ಘ ವರ್ತುಲ ಪಾಷಾಣ" ಇತಿ ಡಲ್ಹಣಃ) (Round stone.) ಇದರಂತೆ ಅಥವಾ ಅನ್ಯಆಕಾರದ ಪಾಷಾಣ (ಕಲ್ಲು) ಗಳ ಪ್ರಯೋಗವು ಅಸ್ಥಿಶಲ್ಯಗಳ ಚಾಲನಾರ್ಥವಾಗಿ ಮತ್ತು ಅಂಜಲಿ ಭಗ್ನ

---

ನಿಕ ಶಲ್ಯ ವಿಜ್ಞಾನದಲ್ಲಿಯೂ ಪ್ರಯೋಗ ಮಾಡಲ್ಪಡುತ್ತದೆ. ಮತ್ತು ಕೈಟಗಟ [Catgut ಬಿಡಾಲಾಂತ್ರ] ದ ಹೆಸರಿನ ಮೇಲೆ ಪ್ರಸಿದ್ಧವಿದೆ. ಮತ್ತು ಮೇಷದ ಶುಷ್ಕ ಆಂತ್ರದಿಂದ ಸೂತ್ರದಂತೆ [Fine – thread like] ಆಗುತ್ತದೆ ಹೇಗೆಂದರೆ :—

CAT-GUT :— Now prepared from the intestines of the sheep by thoroughly scraping away the mucus membrane from their wall."—A Guide to Instruments. ಈಗ [ಅಂದರೆ– ಮೊದಲು ಇದು ಬಿಡಾಲ ಆಂತ್ರ ದಿಂದ ಸಿದ್ಧವಾಗುತ್ತಲಿತ್ತು. ಆದರೆ ಈಗ] ಕುರಿ [ಮೇಷ] ಯ ಆಂತ್ರ ದಿಂದ ಆಗುತ್ತದೆ. ಅದರ ಶ್ಲೈಷ್ಮಿಕ ಕಲಾಗಳನ್ನು ಮೊಟ್ಟ ಮೊದಲು ಎಲ್ಲವೂ ತೆಗೆದು ಸ್ವಚ್ಛ ಮಾಡಲಾಗುತ್ತಿದೆ. (ಮತ್ತು ಪುನಃ ಆಂತ್ರವನ್ನು ಬಿಸಿಲಲ್ಲಿ ಒಣಗಿಸಿ ಸೂತ್ರ ಮಾಡಲಾಗುತ್ತಿದೆ] ಪುನಃ Tincture of Iodine ಅಥವಾ chromic acid ಯಲ್ಲಿ ಇದನ್ನು ಶುದ್ಧ [Sterilised] ಮಾಡಲಾಗುತ್ತಿದೆ. ಈ ಸೂತ್ರವು ಭಿನ್ನ ಭಿನ್ನ ದಪ್ಪ ವಾದ ಬಾಟಲಿಯಲ್ಲಿ ಮುಚ್ಚಲ್ಪಟ್ಟು ಸಿಗುತ್ತದೆ.

ಪ್ರಯೋಗಃ— ಶಸ್ತ್ರ ಕರ್ಮದ ನಂತರ ಸಿರಾ, ಸ್ನಾಯು, ಇತ್ಯಾದಿ ಗಳನ್ನು ಹೊಲಿಯುವ ಅಥವಾ ಕಟ್ಟುವ ಕೆಲಸಕ್ಕೆ ಬರುತ್ತದೆ. ವಸ್ತುತಃ

ದಲ್ಲಿ ಅಂಗೈಯಲ್ಲಿ ಧಾರಣಾರ್ಥವಾಗಿ ಉಪಯೋಗಿಸಲಾಗುತ್ತಿದೆ.

(೯) ಮುದ್ಗರ (Hammer wooden or metallic) (ಕಾಷ್ಠಾದಿಕೃತಃ ಇತಿ ಡಲ್ಹಣಃ) ಕಾಷ್ಠ (ಕಟ್ಟಿಗೆ) ಅಥವಾ ಕಬ್ಬಿಣದಿಂದ ಮಾಡಿದ ಸುತ್ತಿಗೆ ಅಥವಾ ಕೊಡತಿ (Mallet) ಅಸ್ಥಿಗತ ಶಲ್ಯದ ನಿರ್ಹರಣಾರ್ಥವಾಗಿ ಪ್ರಯುಕ್ತವಾಗುತ್ತಿತ್ತು. ಇಂದಿಗೂ ಸಹ ಅಸ್ಥಿಗತ ಶಲ್ಯಾಹರಣಾರ್ಥವಾಗಿ ಮಾಡುವ ಶಸ್ತ್ರಕರ್ಮದಲ್ಲಿ ಇದರ ಪ್ರಯೋಗವಾಗುತ್ತದೆ ಮತ್ತು ಇದಕ್ಕೆ Bone hammer (ಅಸ್ಥಿ ಮುದ್ಗರ) ಎನ್ನುತ್ತಾರೆ. ಮುದ್ಗರದ ಅಭಾವದಲ್ಲಿ ಅಶ್ಮ (Stone) ದಿಂದ ಕೆಲಸ ತೆಗೆದುಕೊಳ್ಳಲಾಗುತ್ತದೆ.

---

ಇದರ ಆವಿಷ್ಕಾರವು ಆಯುರ್ವೇದದ್ದೇ ಇವೆ. ಆಂತ್ರವನ್ನು ಕುದಿಸಕಕ್ಕೆ... ಇಲ್ಲದಿದ್ದರೆ ಇವು ಕರಗಿ ನಾಶವಾಗುವದು.

[೨] ಕಾಲ [Time.] ಕಾಲವು ನಿಜವಾಗಿ ಯಂತ್ರವಿರುವದಿಲ್ಲ ಆದರೂ ವಿದ್ರಧಿ ವ್ರಣಶೋಥ ಇತ್ಯಾದಿಗಳು ಪಕ್ವವಾಗುವ [Suppuration] ಮತ್ತು ಒಡೆದು ತುಂಬುವ [ರೋಪಣ-healing] ದರಲ್ಲಿ ಸಮಯದ ಪ್ರತೀಕ್ಷೆಯನ್ನು ಮಾಡಬೇಕಾಗುತ್ತಿದೆ. "Time is the best healer". ಸುಶ್ರುತರೂ ಸಹ ಕ್ರಿಯಾಕಾಲದ ಎರಡನೇ ಕಡೆಗೆ ವರ್ಣನೆಯನ್ನು ಮಾಡಿದ್ದಾರೆ. [ನೋಡಿರಿ ಸು. ಸೂ. ಅ ೨೧]

[೩] ಪಾಕ [Suppuration.] ವ್ರಣಗಳ ಪಾಕದ ಪ್ರತೀಕ್ಷೆಯನ್ನು ಮಾಡುವದು ಆವಶ್ಯಕವಾಗಿದೆ. ಇದೇ ಕಾರಣದಿಂದ ಸುಶ್ರುತ ಸೂತ್ರ ಅ. ೧೭ [ಆಮಪಕ್ವೈಷಣೀಯೋಽಧ್ಯಾಯಃ] ನೋಡತಕ್ಕದ್ದು. ಇವೇ ರೀತಿಯಾಗಿ ಜ್ವರಾದಿಗಳಲ್ಲಿಯೂ ಸಹ ದೋಷ ಪಾಕದ ಪ್ರತೀಕ್ಷೆಯನ್ನು ಮಾಡಲಾಗುತ್ತಿದೆ.

[೪] ಭಯ (Fear.) ಹರ್ಷದ ಸಂಗಡ ಭಯದ ಆವಶ್ಯಕತೆಯು ಇದೆ. ಯಾವಾಗ ರೋಗಿಯು ಶಸ್ತ್ರ ಕರ್ಮದ ಸಮಯದಲ್ಲಿ ವಶದಲ್ಲಿ ಬರದಿದ್ದರೆ ಅಥವಾ ಕೋಲಾಹಲವನ್ನು ಮಾಡಹತ್ತಿದರೆ ಅವನನ್ನು ಅಂಜಿಸಿ -ಜಬರಿಸಿ [ವಿಶೇಷತಃ ಹುಡುಗರನ್ನು] ಸುಮ್ಮನೆ ಮಾಡಲಾಗುತ್ತಿದೆ. ಆಗ ಅದು ಶಸ್ತ್ರ ಕರ್ಮದ ಪೀಡೆಗಳನ್ನು ಸಹನ ಮಾಡಿಕೊಳ್ಳ

(೧೦) ಪಾಣಿತಲ (ಹಸ್ತತಲ–ಅಂಗೈ– Palm of the hand.) ಕರತಲ (ಅಂಗೈ) ಪ್ರಹಾರ ಮಾಡುವ ಮತ್ತು ಒತ್ತಲಿಕ್ಕೆ ಅಥವಾ ಶಸ್ತ್ರ, ಮುದ್ಗರ, ಪಾಷಾಣಾದಿಗಳ ಪ್ರಯೋಗದ ದೆಶೆಯಿಂದ ಪ್ರಯುಕ್ತವಾಗುತ್ತದೆ.

(೧೧)ಪಾದತಲ (Sole of the foot) ಪಾದತಲದ (ಅಂಗಾಲು) ಪ್ರಯೋಗವು ಅಸ್ಥಿ ಭಗ್ನ ಇತ್ಯಾದಿಗಳಲ್ಲಿ ಒತ್ತಲಿಕ್ಕೆ ಉಪಯೋಗ ಮಾಡಲಾಗುತ್ತಿದೆ.

(೧೨) ಅಂಗುಲಿ–ಬೆರಳು (Finger ) "ಹಸ್ತಮೇವ ಪ್ರಧಾನ ತಮಂ ಯಂತ್ರಾಣಾಂ" (ಸುಶ್ರುತ.) ನಾವು ಇದನ್ನು ಮೊದಲೇ ಬರೆದಿದ್ದೇವೆ. ವಸ್ತುತಃ ಹಸ್ತತಲ (ಅಂಗೈ) ಮತ್ತು ಬೆರಳುಗಳ ಹೊರತಾಗಿ ಯಂತ್ರಗಳ ಪ್ರಯೋಗವೇ ಶಕ್ಯವಾಗುವದಿಲ್ಲ. ಕೇವಲ ಬೆರಳುಗಳ ಅಥವಾ ಅಂಗುಷ್ಠದ ಪ್ರಯೋಗವು ವ್ರಣಶೋಥದ ಮಲಿನತೆ, ಪಕ್ವಾಪಕ್ವ ವ್ರಣದ ಪರೀಕ್ಷೆಯು, ಜ್ವರದಲ್ಲಿ ತಾಪಾನುಮಾನವು, ರೋಗಿಯ ಶರೀರದ ಮಾರ್ದವ (ಮೃದುತ್ವ) ಅಥವಾ ಕಾಠಿಣ್ಯ (ಕಠಿಣತೆ) ಭಾವವು, ಅಸ್ಥಿ ಭಗ್ನಾದಿಗಳಲ್ಲಿ ಸಂಧಿ ಮೊದಲಾದವುಗಳ ಸ್ಪರ್ಶ, ಬಾಯಿಯನ್ನು ತೆರೆಯುವದು, ನಾಡೀ ವ್ರಣಾದಿಗಳಲ್ಲಿ ಬೆರಳಿನಿಂದ ಒತ್ತಿ ಕೀವು ಮೊದಲಾದವುಗಳನ್ನು ತೆಗೆಯುವದು, ಭಗಂದರ, ಅರ್ಶ ಇವುಗಳ ಪರೀಕ್ಷೆ ಇತ್ಯಾದಿಗಳಲ್ಲಿ ಅನಿವಾರ್ಯವಾಗಿದೆ.

[೧೩] ಜಿಹ್ವಾ ನಾಲಿಗೆ [ Tongue ] " ರಸನಾರ್ಥೋರಸ " [ಚರಕ] ರಸದ ಜ್ಞಾನಾರ್ಥವಾಗಿ ನಾಲಿಗೆಯ ಪ್ರಯೋಗವಿರುತ್ತದೆ. ಪರಂತು ಮಧು ಮೇಹಾದಿಗಳಲ್ಲಿ ಇರುವೆ ಮೊದಲಾದ ಹುಳಗಳ ನಾಲಿಗೆ

---

ತ್ತದೆ. ಚರಕಾಚಾರ್ಯರೂ ಸಹ ಉನ್ಮಾದೋಪಚಾರದಲ್ಲಿ [ಹುಚ್ಚು ಹಿಡಿದವರ ಉಪಚಾರ ಮಾಡುವ ಕಾಲಕ್ಕೆ] ಭಯದ ಉಪಾಯದ ಮಹತ್ವತೆಯನ್ನು ಈ ರೀತಿಯಾಗಿ ವರ್ಣನೆ ಮಾಡಿದ್ದಾರೆ.— " ತ್ರಾಸಯೇಯುರ್ಬುಧೇನ್ನೈನಂ ತರ್ಜಯಂತೋ ನೃಪಾಜ್ಞಯಾ ||೮೯|| ದೇಹ ದುಃಖ ಭಯೇಭ್ಯೋಹಿ ಪರಂ ಪ್ರಾಣಭಯಂ ಮಹತ್ "|| ಹೀಗೆ ತ್ರಾಸನ [ಭಯ] ದ ಪ್ರಯೋಜನೆಯನ್ನು ಬರೆದಿದ್ದಾರೆ. ಪ್ರಾಣ ಭಯವು ಎಲ್ಲ ಭಯಗಳಕಿಂತಲೂ ಹೆಚ್ಚಿನದಿರುತ್ತದೆ.

ಯಿಂದ ಲಾಭ ಪಡೆಯತಕ್ಕುದು. ಪಶುಗಳಂತೂ ತಮ್ಮ ನಾಲಿಗೆಯ ವ್ರಣಗಳ ಶೋಧನ, ರೋಪಣಾರ್ಥವಾಗಿ ಉಪಯೋಗವನ್ನು ಮಾಡ ಮಾಡುತ್ತವೆ.

(೧೩)ದಂತ (Teeth.) ಹಸ್ತಿದಂತ (ಆನೆಯ ಕೋರೆ) ದ ಪ್ರ ಗವು ಯಂತ್ರ ನಿರ್ಮಾಣದಲ್ಲಿ ಹಾಗೂ ವ್ರಣವು ಮುಚ್ಚಲ್ಪ ರೋಮೋತ್ಪಾಟನಾರ್ಥ (ಕೂದಲಗಳನ್ನು ಕಿತ್ತಲಿಕ್ಕೆ) ವಾಗಿ ಮಾಡ ತ್ತದೆ. ಕೆಲವುಸಾರೆ ಗ್ರಂಥಿಯನ್ನು ಬಿಚ್ಚಲಿಕ್ಕೆ ಮತ್ತು ರಜ್ಜುಗಳನ್ನು ರಿಸಲಿಕ್ಕೆಯೂ ಸಹ ದಂತವು ಕೆಲಸಕ್ಕೆ ಬರುತ್ತದೆ.

(೧೪) ನಖ (Nail.) ಉಗುರಿನ ಪ್ರಯೋಗವು ತ್ವಗ್ಗತ ಶಲ್ಯ (ಮುಳ್ಳು- ಚಕ್ಕೆ ಇತ್ಯಾದಿ) ಗಳನ್ನು ತೆಗೆಯಲಿಕ್ಕಾಗಿದೆ. ಕೆಲವು ಸ್ಫೋಟ (B[eb) ಇತ್ಯಾದಿಗಳಲ್ಲಿ ಯಾವಾಗ ಕೀವು ಅಥವಾ ತುಂಬಿರುವದೋ, ಆಗ್ಗೆ ಅದನ್ನು ಉಗುರಿನ ಪ್ರಯೋಗದಿಂದ ಭೇ (ಒಡೆತ) ಮಾಡಲಾಗುತ್ತಿದೆ. ಅದರೆ ಉಗುರು ಸ್ವಚ್ಛವಾಗಿರತಕ್ಕ ವ್ರಣ ಗತ ಚರ್ಮ ಅಥವಾ ಸೂಕ್ಷ್ಮ ಸಿರಾದಿಗಳನ್ನು ತೆಗೆಯುವ ಅಥ ಬೇರೆ ಮಾಡುವದಕ್ಕೆ ನಖ (ಉಗುರಿನ)ದ ಉಪಯೋಗವಾಗುತ್ತಿದೆ.

[೧೫] ಮುಖ (Mouth) ಮುಖದ ಪ್ರಯೋಗವು ಕೆಲವು ಸ ವಿಷ, ದುಷ್ಟ ಸ್ತನ್ಯ, ಕೀವು ಮೊದಲಾದವುಗಳನ್ನು ಹೀರುವದಕ್ಕೆ ಯುಕ್ತವಾಗಿದೆ. ಪರಂತು ಈ ಪ್ರಯೋಜನೆಯು ದೇಶೆಯಿಂದ ಇತ್ತೀ Breast pump, Suction pump ಇತ್ಯಾದಿಗಳ ಪ್ರಯೋಗ ಮುಖದ ಸ್ಥಾನಾಪನ್ನ [ಮುಖದ ಸ್ಥಾನವನ್ನು ಆಕ್ರಮಣ] ವಾಗಿ ಕೆಲವು ನೌಕರರು ಪ್ಲೇಗಿನ ದಿನಗಳಲ್ಲಿ ಗಂಟನ್ನು ಬಾಯಿಯಿಂದ ಹೀ ವಿಷವನ್ನು ತೆಗೆಯುತ್ತಾರೆ. ಪುನಃ ಬಾಯಿಯನ್ನು ತೊಳೆದುಕೊಳ್ಳುವ ಅವಶ್ಯಕವಿದೆ. ಶೃಂಗದಿಂದ ರಕ್ತಾದಿಗಳನ್ನು ಹೀರುವದು ಸಹ ಬಾಯಿ ಮೇಲೆಯೇ ನಿರ್ಭರವಾಗಿದೆ.

[೧೬] ಬಾಲ (ಕೂದಲು-Hair.) ಅಪಾಪಾತನ [ಮಾಂಸ ಬೆ ಲಿಕ್ಕೆ] ಕಂಠಗತ ಶಲ್ಯ, ವ್ರಣವನ್ನು ಹೊಲಿಯುವದು, (Suturing) ಶಿರೋಗತ ವ್ರಣಾದಿಗಳಲ್ಲಿ ಕೂದಲುಗಳ ಪ್ರಯೋಗ ಮಾಡಲಾಗುತ್ತಿದೆ

ಈ ವಿಷಯವಾಗಿ ಶಸ್ತ್ರಗಳಲ್ಲಿ ಎಷ್ಟೋ ಪ್ರಮಾಣಗಳು ಸಿಗುತ್ತವೆ. ಇವ ತ್ತಿಗೂ ಕುದುರೆಯ (ಬಾಲದ) ಕೂದಲುಗಳು ವ್ರಣವನ್ನು ಹೊಲಿಯಲಿಕ್ಕೆ ಮತ್ತು ಕಂಠಗತ ಶಲ್ಯೋದ್ಧರಣಾರ್ಥವಾಗಿ (Probang and coin catcher) ಪ್ರಯುಕ್ತವಾಗುತ್ತವೆ. ಮತ್ತು ನೊಳಕೆಗಳನ್ನು ಕತ್ತರಿಸುವ ದಕ್ಕೂ ಕುದುರೆಯ ಕೂದಲುಗಳನ್ನು ಕಟ್ಟಿ ಅದನ್ನು ಸಾವಕಾಶವಾಗಿ ಬಿಗಿಯುತ್ತಾರೆ.

[೧೭] ಅಶ್ವಕಟಕ (ಘೋಟಕ ಕವಿಕಾ ಚೂಡಕ ಮಿತಿ ಡಲ್ಹಣಃ)- ಇದು ಕುದುರೆಯ ಲಗಾಮು (Bridle) ಇರುತ್ತದೆ. ಅಸ್ಥಿಗತ ಶಲ್ಯೋದ್ಧರಣಾರ್ಥವಾಗಿ ಇದನ್ನು ಬಾಣಾದಿ ಶಲ್ಯಗಳ ಸಂಗಡ ಕಟ್ಟಿ ಕುದುರೆಗೆ ಬಾರುಕೋಲು [ಚಾಬುಕ] ದಿಂದ ಹೊಡೆಯಲಾಗುತ್ತಿದೆ. ಆಗ ಕುದುರೆಯು ತನ್ನ ಶಿರೋ ವೇಗದಿಂದ ಶಲ್ಯವನ್ನು ತೆಗೆದು ಬಿಡುತ್ತದೆ. [ಸು. ಸೂ. ಅ. ೨೭] ಪ್ರಾಚೀನ ಕಾಲದಲ್ಲಿ ಈ ಪ್ರಯೋಗದ ದೆಶೆಯಿಂದ ಕುದುರೆಗಳು (Trained) ಶಿಕ್ಷಣ ಹೊಂದುತ್ತಿದ್ದವು. ಈಗ ಈ ಕೆಲಸವು ಮಿಶಿನ್ನಿನ ಸಹಾಯದಿಂದ ಮಾಡಲ್ಪಡುತ್ತದೆ.

(೧೮) ಶಾಖಾ (Branch of a tree) ವೃಕ್ಷದ ಟೊಂಗೆಯು ಇದರ ಪ್ರಯೋಗವೂ ಸಹ ಅಶ್ವ ಕಟಕದಂತೆ ಅಸ್ಥಿಗತ ಶಲ್ಯವನ್ನು ತೆಗೆಯುಲಿಕ್ಕಾಗಿರುತ್ತಿತ್ತು. ಹೇಗೆಂದರೆ— " ದೃಢಾಂವಾ ವೃಕ್ಷಶಾಖಾಮವನಮ್ಯ ತಸ್ಯಾಂ ಪೂರ್ವವತ್ ಬಧ್ವೋದ್ಧರೇತ್ ॥೧೬॥ (ಸು, ಸೂ. ಅ. ೨೭) ಇಲ್ಲಿ ಶಾಖೆಯ ಆವಿಷ್ಕಾರವು ಸ್ಪ್ರಿಂಗಿನ (Spring) ಕಾರ್ಯ ಮಾಡುತ್ತಿದ್ದವು ಶಲ್ಯವು ಎಷ್ಟು ತೀವ್ರವಾಗಿ ಜೋರಿನಿಂದ ತೆಗೆಯಲಾಗುತ್ತಿದೆಯೋ ಅಷ್ಟು ತೀವ್ರ, ಸಾವಕಾಶವಾಗಿ ತೆಗೆಯುವದರಿಂದ ಕೀರ್ತಿ ಬರುವದಿಲ್ಲ. ಎಂಬುದು ನೆನಪಿನಲ್ಲಿಡಬೇಕಾದುದಾಗಿದೆ. ಅನಂತರ ಪೀಡೆಯೂ ಬೇಗ ಶಾಂತವಾಗಿ ಹೋಗುತ್ತದೆ.

(೧೯) ಷ್ಠೀವನ (Spitting) "ಶ್ಲೇಷ್ಮಾದಿ ನಿರಸನಮಿತಿ ಡಲ್ಹಣಃ ಮುಖ ಅಥವಾ ಕಂಠಸ್ಥ ಶಲ್ಯವನ್ನು ತೆಗೆಯಲಿಕ್ಕೆ (ಹೊರಗೆ ಹಾಕಲಿಕ್ಕೆ) ಷ್ಠೀವನ .(ಉಗುಳುವದರಿಂದ) ಅರ್ಥಾತ್ ಬಲಪೂರ್ವಕ ಉಗುಳುವದರಿಂದ ರೋಗಿಯು ಹೊರಗೆ ತೆಗೆದು ಬಿಡುತ್ತಾನೆ.

(ಬುಗ್ಗೆ) ಬಕ್ಕೆಗಳು ಹಣ್ಣಾಗಿರುವಾಗಲೇ ಅದರ ಮೇಲೆ ಪ್ರಾತಃ
ಕಾಲದ ಉಗುಳು (Saliva) ಹಚ್ಚುವದರಿಂದ ಅದರ ವಿಮ್ಲತೆಯು
ತ್ತದೆ. (ಅದು ಬಾಡುತ್ತದೆ) ಇದು Auto-vaccine (ಆತ್ಮವಿಷ)
ಕೆಲಸ ಮಾಡುತ್ತದೆ. ಈ ಸಾಧಾರಣ ಪ್ರಯೋಗದಿಂದ ರೋಗಿ
ಮುಂದಿನ ಕಷ್ಟದಿಂದ ಉಳಿಯುತ್ತಾನೆ. ಇದನ್ನೂ ಇಲ್ಲಿ ಪ್ರಸಂಗವ
ವಾಗಿ ಹೇಳಲಾಗಿದೆ.

(೨೦) ಪ್ರವಾಹಣ (Forcing out) ವಾತ, ಮಲ-ಮೂ
ಗರ್ಭಾದಿಗಳನ್ನು ತೆಗೆಯಲಿಕ್ಕೆ ಪ್ರವಾಹಣ ಮಾಡಲಾಗುತ್ತಿದೆ. ಅಥ
ಜೋರು ಮಾಡಲಾಗುತ್ತಿದೆ. ಕಣ್ಣುಗಳಲ್ಲಿ ಸೇರಿದ ಹುಡಿ, ಧೂಳ ಅ
ಕಸರು ಅಶ್ರು ಸ್ರಾವದಿಂದ ನಾಸಾಗತ ಶಲ್ಯವು ಸೀನುವದರಿಂದ ಹೊ
ಬರುತ್ತದೆ. ಇವೆಲ್ಲವೂ ವಾಯುಪ್ರೇರಿತ ಪ್ರವಾಹಣವೆನಿಸುತ್ತಿವೆ

(೨೧) ಹರ್ಷ (Joy, Ecstacy) ತುಷ್ಟಿ, ಪ್ರಸನ್ನತೆ (ಸಂತೋ
ಇವೆಲ್ಲ ಹೃದಯ ಅಥವಾ ಮನೋಗತ ದುಃಖ, ಯಾವದಕ್ಕೆ ಸುಶ್ರು
"ಶೋಕಶಲ್ಯ" ಎಂದು ಹೇಳಿದ್ದಾರೋ ಅದನ್ನು ಉನ್ಮೂಲನ ಮಾ
ಏಕಮಾತ್ರ ಸಾಧನವಾಗಿದೆ. ಹರ್ಷ ಸೂಚನೆ ಆಶ್ವಾಸನ, ಪ್ರಿಯ
ಇತ್ಯಾದಿಗಳಿಂದ ರೋಗಿಯ ಮನಸ್ಸನ್ನು ಬದಲಿಸಿ ಅಥವಾ ಭಾವಾ
ವನ್ನು ಹೊಂದಿ ದುಃಖವು ನಿವೃತ್ತ ಅಥವಾ ನ್ಯೂನ (ಕಡಿಮೆ) ಯಾಗುತ್ತ
ತದ್ವಿಪರೀತವಾಗಿ "ಭಯ" (ತ್ರಾಸನ) ದ ಪ್ರಯೋಗವೂ ಮಾಡಲಾ
ತ್ತಿದೆ. ಯಾವ ರೀತಿಯಾಗಿ ವಾಗ್ಭಟರು ಹೇಳಿದ್ದಾರೊ ಅದೇ ರೀತಿಯ
ಕಾಮಾತುರನಾದವನ ವೇಗವು ಕ್ರೋಧದಿಂದಲೂ ಕ್ರೋಧದ ವೇಗವು
ಕಾಮದಿಂದ ಗೆದೆಯಲ್ಪಡುತ್ತದೆ. ಈ ವಿಷಯವು ಮನೋವಿಜ್ಞಾ
[Psychology] ದ್ದು ಇರುತ್ತದೆ.

(೨೨) ಅಯಸ್ಕಾಂತ (Lodestone)— Magnet) ಲೋಹ
ಶಲ್ಯದ ಪರೀಕ್ಷಾರ್ಥವಾಗಿ ಪ್ರಾಚೀನಕಾಲದಲ್ಲಿ ಚುಂಬಕಶಕ್ತಿಯ ಪ್ರಯೋ
ಮಾಡಲಾಗುತ್ತಿತ್ತು. ಈಗೂ ಅಕ್ಷಿಗತ ಲೋಹ ಕಣವನ್ನು ಚುಂ
ದಿಂದ ತೆಗೆಯುತ್ತಾರೆ. ಸಂಧಿಗ್ಧ ಶಲ್ಯಸ್ಥಾನದ ಮೇಲೆ ಅಯಸ್ಕಾಂತವನ್ನು
ಅಲಗಾಡಿಸುವದರಿಂದ ಶಲ್ಯವೂ ಆಕರ್ಷಿತವಾಗಿ ಅಲಗಾಡುತ್ತದೆ.

ಈ ಪರೀಕ್ಷೆಯು X-Ray ದ್ವಾರಾ ಆಗುತ್ತವೆ. ಅಯಸ್ಕಾಂತದ ಉಭೇದ ಗಳನ್ನು ಡಲ್ಹಣನು ಹೇಳಿದ್ದಾನೆ. ಹೇಗೆ— "ಅಯಸ್ಕಾಂತಃ ಪಾಷಾಣ ವಿಶೇಷಃ, ಆಕರ್ಷಕ ದ್ರಾವಕ ಚುಂಬಕ ಭ್ರಾಮಕ ಭೇದಾಚ್ಚತುರ್ವಿಧಃ" ಚುಂಬಕಶಕ್ತಿ—(Magnetism) ಯ ವಿಸ್ತೃತ ವರ್ಣನೆಯನ್ನು ನಮ್ಮ "ಪ್ರಾರಂಭಿಕ ವಿಜ್ಞಾನ" ಎಂಬುವ ಪುಸ್ತಕದ ಪಂಚಮ ಪ್ರಕರಣದಲ್ಲಿ ನೋಡಿರಿ.

(೨೩) ಕ್ಷಾರ (Alkalis, Caustic) ಇದರ ವರ್ಣನೆಯು ಸು. ಸೂ. ಅ. ೧೧ರಲ್ಲಿ ನೋಡಿರಿ. ಕ್ಷಾರ ಮತ್ತು ಸೂತ್ರದ ಪ್ರಯೋಗವನ್ನು ಭಗಂದರ, ಅರ್ಶ ಇತ್ಯಾದಿಗಳಲ್ಲಿ ಮಾಡಲಾಗುತ್ತಿತ್ತು. ಈಗಲೂ ಸಹ Caustic touch ಇಂಥ ರೋಗಗಳ ಪ್ರಸಿದ್ಧ ಉಪಾಯವಾಗಿದೆ.

(೨೪) ಅಗ್ನಿ (Cautery) ಅರ್ಶ, ಭಗಂದರ, ದುಷ್ಟವ್ರಣಾದಿಗಳ ಮೇಲೆ ಅಗ್ನಿಕರ್ಮವು ಬಹುತರವಾಗಿ ಮಾಡಲಾಗುತ್ತಿದೆ. ಅದರ ವಿಸ್ತೃತ ವರ್ಣನೆಯು ಸು. ಸೂ. ಅ. ೧೨ ರಲ್ಲಿ ನೋಡಿರಿ ಜಾಂಬವಮುಖಾದಿ ಯಂತ್ರಗಳ ವ್ಯಾಖ್ಯೆಯಲ್ಲಿ ನಾವು ಮೊದಲೇ ತೋರಿಸಿದ್ದೇವೆ.

(೨೫) ಭೇಷಜ (Medicines, Drugs) ಸು. ಸೂ ಅ. ೩೭ರಲ್ಲಿ ವ್ರಣಪಾಟನ, ರೋಪಣ ಇತ್ಯಾದಿಗಳ ದೆಶೆಯಿಂದ ಔಷಧಗಳ ಪ್ರಯೋಗ ವನ್ನು ನೋಡಿರಿ. ದಾರುಣ ವರ್ಗದ ಔಷಧಿಯು ಶಸ್ತ್ರದಂತೆ ಕಲಸ ಮಾಡುತ್ತಿದೆ.

## ಯಂತ್ರ ಕರ್ಮಗಳು

### Functions of the Instruments.

ಯಂತ್ರ ಕರ್ಮಾಣಿತು— ನಿರ್ಘಾತನ- ಪೂರಣ- ಬಂಧನ- ವ್ಯೂಹನ ವರ್ತನ- ಚಾಲನ- ವಿವರ್ತನ- ವಿವರಣ- ಪೀಡನ- ಮಾರ್ಗವಿಶೋಧನ ವಿಕರ್ಷಣ- ಆಹರಣ- ಆಂಛನ- ಉನ್ನಮನ- ವಿನಮನ- ಭಂಜನ ಉನ್ಮಥನ- ಆಚೂಷಣ- ಏಷಣ- ದಾರಣ- ಋಜೂಕರಣ- ಪ್ರಕ್ಷಾಲನ ಪ್ರಧಮನ- ಪ್ರಮಾರ್ಜನಾನಿ ಚತುರ್ವಿಂಶತಿಃ ॥೧೭॥ (ಸು ಸೂ. ಅ. ೭)

ಈ ಕ್ರಿಯೆಗಳ ಸಂಕ್ಷಿಪ್ತ ವ್ಯಾಖ್ಯೆಯನ್ನು ಕೆಳಗೆ ಅವಲೋಕಿಸಿರಿ.

(೧) ನಿರ್ಘಾತನ— "ಇತಶ್ಚೇತಶ್ಚ ವಿಚಾಲ್ಯ ನಿರ್ಹರಣಮ್" ಇತಿ (ಡಲ್ಹಣಃ) ಅರ್ಥ— ಇತ್ತಿಂದತ್ತ ಶಲ್ಯವನ್ನು ಅಲಗಾಡಿಸಿ ತೆಗೆಯುವದು.

ಅಥವಾ 'ಇತಶ್ಚೇತಶ್ಚ ಘಟ್ಟನ ಮಿತ್ಯೇಕೇ"— ಅರ್ಥಾತ್ ಇತ್ತ... ಅಲಗಾಡಿಸುವದು, ಪಾಷಾಣ, ಮುದ್ಗರ ಇತ್ಯಾದಿಗಳಿಂದ ಪ್ರಹಾರ ... ವದು [Hammering]. [೨] ಪೂರಣ—ವ್ರಣಾದಿಗಳನ್ನು ... ಗಳಿಂದ ತುಂಬುವದು ಹಚ್ಚಿಸುವದು [Filling]. (೩) ಬಂಧನ—... ಗಳ ಮೇಲೆ ಪಟ್ಟಿಯನ್ನು ಕಟ್ಟುವದು (Bandaging). (೪) ವ್ಯೂ... ಇದನ್ನು ಮೊದಲು ಸರ್ಪಫಣೀ ಯಂತ್ರಗಳ ವ್ಯಾಖ್ಯೆಯಲ್ಲಿ ಕೊಡ... [೫] ವರ್ತನ— ತಿರುಗಿಸುವದು. [Rounding] "ವಿವೃತಸ್ಯ ವ... ಕರಣಮ್" ಡಲ್ಲಣಃ [೬] ಚಾಲನ- ಅಗಲಾಡಿಸುವದು, Movi... [೭] ವಿವರ್ತನ-ಯಂತ್ರ, ಹಸ್ತಾದಿಗಳಿಂದ ಹಿಡಿದು ಎಳೆಯುವದು ... ತಿರುಗಿಸುವದು. (೮) ವಿವರಣ— ವ್ರಣಮುಖವನ್ನು ತೆರೆಯು... ಅಥವಾ ಅಗಲಿಸುವದು (Dilating) (೯) ಪೀಡನ- ಒತ್ತು... Pressing. ವ್ರಣವನ್ನು ಒತ್ತಿಕ್ಕಿ ಕೀವು ಮೊದಲಾದವುಗಳನ್ನು ತೆ... ವದು, "ಪೀಡನಂ ವ್ರಣಸ್ಯ ಪೂಯಾದಿ ನಿರ್ಗಮನಮ್" (ಡಲ್ಹಣ) (... ಮಾರ್ಗವಿಶೋಧನ— ಮೂತ್ರಮಲಾದಿಗಳ ಮಾರ್ಗಗಳನ್ನು ಶಲಾ... ಯಂತ್ರದ್ವಾರಾತೆರೆಯುವದು ಮತ್ತು ಅಗಲಮಾಡುವದು (Dilating... ವಿಕರ್ಷಣ — "ವಿಗೃಹ್ಯ ಕರ್ಷಣಮ್" (ಡಲ್ಹಣ) — ಹಿಡಿ... ಹೊರಗೆ ಎಳೆಯುವದು. ಉದಾ :— ಬಾಣ, ಮುಳ್ಳು, ಗರ್ಭಾ...

---

(೧) ವಾಗ್ಭಟೋಕ್ತ ಯಂತ್ರ ಕರ್ಮ — "ನಿರ್ಘಾತನೋನ್ಮ... ಪೂರಣ ಮಾರ್ಗಶುದ್ಧಿ ಸಂವ್ಯೂಹನಾಹರಣ-ಬಂಧನ—ಪೀಡನಾನಿ|ಆಚೂ... ಣೋನ್ನಮನ ನಾಮನ ಚಾಲಭಂಗ ವ್ಯಾವರ್ತನರ್ಜು ಕರಣಾನಿಚಯಂ... ಕರ್ಮ" ||೪೧|| [ಅ. ಹೃ. ಸೂ. ಅ. ೨೫] ಇವು ಯಂತ್ರಕರ್ಮ ಸಂ... ಯಲ್ಲಿ ೧೬ ಇರುತ್ತವೆ. ಸುಶ್ರುತೋಕ್ತ ೨೪ ಕಾರ್ಯಗಳಲ್ಲಿಂದ ೯ ಕರ್ಮ... ಗಳನ್ನು ವಾಗ್ಭಟರು ಬಿಟ್ಟಿದ್ದಾರೆ. "ನಿರ್ಘಾತನಂ ತಾಡನಂ ಪರಿಪಾ... ಮಿತಿ ಅರುಣದತ್ತಃ" ನಿರ್ಘಾತನದ ಅರ್ಥವನ್ನು ಅರುಣದತ್ತನು ತಾ... ಅಥವಾ ಪರಿಪಾತನ [ಮುದ್ಗರಾದಿಗಳ ಪ್ರಹಾರವು - Hammering... ಎಂದು ಹೀಗೆ ವಿವರಣೆ ಮಾಡಿದ್ದಾರೆ. ಉಳಿದ ಅರ್ಥವನ್ನು ಮೇಲೆನೋ...

ಗಳ (Extraction), ೧೨ (ಆಹರಣ "ಆನಯನಮ್"– ತೆಗೆಯುವದು. ೧೩) ಆಂಛನ— "ಈಷನ್ಮುಖೆ ಆನಯನಮ್" ಡಲ್ಹಣಃ. ಮುಖದ ಕಡೆಗೆ ತರುವದು ಮತ್ತು ಎಳೆಯುವದು(Drawing) ೧೪) ಉನ್ನಮನ "ಅಧಃ ಸ್ಥಿತಸ್ಯ ಶರಃ ಕರಣಾರ್ದೇಃ ಊರ್ಧ್ವಂ ನಯನಂ ಇತಿ ಡಲ್ಹಣಃ" ಕೆಳಗಿದ್ದ ಶಿಲ್ಲೆ ಎಲಬು ಮೊದಲಾದವುಗಳನ್ನು ಮೇಲೆ ಎತ್ತುವದು (Elevation Uplifting.) ೧೫) ವಿನಮನ– ಕೆಳಗೆ ಮಾಡುವದು (Depressing.) ೧೬) ಭಂಜನ— ಮುರಿಯುವದು, ತುಣುಕು ತುಣುಕು ಮಾಡುವದು, ಉದಾಃ— ಅಶ್ಮರೀ ಮೊದಲಾದವುಗಳನ್ನು ಮಾಡಿದಂತೆ. ೧೭) ಉನ್ಮಥನ— "ಪ್ರನಷ್ಟ ಶಲ್ಯಸ್ಯ ಮಾರ್ಗೇ ಶಲಾಕಾದಿಭಿರಾಲೋಡನಮ್" (ಡಲ್ಹಣಃ) ಅರ್ಥಾತ್- (ಪ್ರನಷ್ಟ) ಮುರಿದ ಶಲ್ಯವನ್ನು ಶಲಾಕಾದಿಗಳಿಂದ ಅಗಲಿಸಿ ಹೇಗೆ ಅಶ್ಮರೀ ಮೊದಲಾದವುಗಳನ್ನು ಸೌಂಡ (Sound) ದಿಂದ ಅಥವಾ ಮುರಿದ ಎಲುವಿನಿಂದ ಗಂಡೂಪದ ಮುಖ ಶಲಾಕೆಯಿಂದ. ೧೮) ಆಚೂಷಣ— ವಿಷ, ದುಷ್ಟಸ್ತನ್ಯ, ರಕ್ತಾದಿಗಳನ್ನು ಶೃಂಗ ಅಥವಾ ಮುಖದಿಂದ (Suction) ೧೯) ಏಷಣ— "ಗಂಡೂಪದ ಮುಖೇನ—ಗತೇರನ್ವೇಷಣಮ್" ಗಂಡೂಪದ ಮುಖ ಶಲಾಕಾ (Probe) ದಿಂದ ವ್ರಣದ ಗತಿ (ಮಾರ್ಗ ಇತ್ಯಾದಿಗಳನ್ನು) ಯನ್ನು ಪರೀಕ್ಷಿಸುವದು (Exploration). ಉದಾ :— ಭಗಂದರ ನಾಡೀ ವ್ರಣಾದಿಗಳಲ್ಲಿ. ೨೦) ದಾರಣ — "ಶರಃಕರ್ಣಾದಿ ದ್ವಿಧಾಕರಣಮ್" ಡಲ್ಹಣಃ ಬಾಣಾಗ್ರ (Arrow— head) ವನ್ನು ಎರಡು ಭಾಗಗಳಲ್ಲಿ ಕತ್ತರಿಸುವದು (Splitting, cleaving.) ಅಥವಾ ಪಾರಿವಾಳದ ಮಲ ಇತ್ಯಾದಿಗಳಿಂದ ವ್ರಣವನ್ನು ಒಡೆಯುವದು. ೨೧) ಋಜೂಕರಣ— ಕುಟಿಲ ಶಲ್ಯ ಅಥವಾ ಅಂಗವನ್ನು (ಸೊಟ್ಟಾದ ಶಲ್ಯವನ್ನು) ಅಥವಾ ಅವಯವವನ್ನು ಸೀದಾ ಮಾಡುವದು (Straightening). ೨೨) ಪ್ರಕ್ಷಾಲನ— ಒಗೆಯುವದು ಅಥವಾ ಶುದ್ಧಮಾಡುವದು, ತ್ರಿಫಲಾದಿ ಕ್ವಾಥದ್ವಾರದಿಂದ (Washing or Sterilisation) ೨೩) ಪ್ರಧಮನ— "ಶ್ಲೇಷ್ಮಶಲ್ಯಸಂಗೇ ನಾಸಿಕಾಯಾಂ ನಾಡ್ಯಾ ಚೂರ್ಣ ಕ್ಷೇಪಣಂ" (ಡಲ್ಹಣಃ.) ನಾಸಿಕಾದಲ್ಲಿ ಶ್ಲೇಷ್ಮಾದಿಗಳ ರೋಧದಲ್ಲಿ ನಳಿಕೆ

(Pipe) ಯ ದ್ವಾರಾ ನಸ್ಯಚೂರ್ಣವನ್ನು ಊದುವದು (Insuffla-tion) ಮತ್ತು ೨೪) ಪ್ರಮಾರ್ಜನ— "ಪ್ರೋಂಛನಂ ಬಾಲಾಂಶು ವಸ್ತ್ರೈ ರಕ್ತಿರಜಃ ಶಲ್ಯಾದಿಷು" (ಡಲ್ಹಣಃ) ಒರೆಸುವದು ಅಥವಾ ಕಣ್ಣ... ಧೂಳಿಯ ಕಣವು ಅಥವಾ ವ್ರಣಾದಿಗಳಿಂದ ಕೀವು ಮೊದಲಾದವು... ಬಾಲ (ಕೂದಲು), ವಸ್ತ್ರ, ಅರಳಿ ಇತ್ಯಾದಿಗಳಿಂದ ಸ್ವಚ್ಛ ಮಾಡುವ... (Cleansing or Removing dirt, Pus etc).

ಈ ಕ್ರಿಯೆಗಳು ಅಭ್ಯಾಸದಿಂದ ಸುವಿಜ್ಞಾತ (ಚನ್ನಾಗಿ ತಿಳಿಯ... ವಾಗುತ್ತವೆ. ಹೇಗೆಂದರೆ ಸುಶ್ರುತರು ಹೀಗೆಹೇಳಿದ್ದಾರೆ "ಸ್ವಬುದ್ಧ್ಯಾ... ವಿಭಜೇದ್ಯಂತ್ರ ಕರ್ಮಣಿ ಬುದ್ಧಿಮಾನ್॥ ಅಸಂಖ್ಯೇಯವಿಕಲ್ಪತ್ವಾ... ಲ್ಯಾನಾಮಿತಿ ನಿಶ್ಚಯಃ ॥೧೮॥ (ಸು. ಸೂ. ಅ. ೭) ಬುದ್ಧಿವಾನ್‌ವೈದ್ಯ... ಶಲ್ಯಗಳ ಅನಂತ ಪ್ರಕಾರವಾದುದರಿಂದ ಯಂತ್ರಗಳ ಕರ್ಮವನ್ನು ತ... ಬುದ್ಧಿಯಿಂದ ವಿಭಜಿಸತಕ್ಕುದು.

## ಯಂತ್ರ ದೋಷಗಳು.
## (Defects of the Instruments)

ತತ್ರ ಅತಿ ಸ್ಥೂಲಂ, ಅಸಾರಂ, ಅತಿದೀರ್ಘಂ, ಅತಿಹ್ರಸ್ವಂ, ಅಗ್ರಾಹಿ, ವಿಷಮಗ್ರಾಹಿ, ವಕ್ರಂ, ಶಿಥಿಲಂ, ಅತ್ಯುನ್ನತಂ, ಮೃದುಕೀಲಂ, ಮೃದುಮುಖಂ ಮೃದುಪಾಶಮಿತಿ ದ್ವಾದಶ ಯಂತ್ರದೋಷಾಃ ॥೧೯॥

(ಸು. ಸೂ. ಅ. ೭)

ಯಂತ್ರಗಳಲ್ಲಿ ೧೨ ದೋಷಗಳಿರುತ್ತವೆ. ೧) ಅತಿಸ್ಥೂಲ – ಇದರಿಂ... ಯಂತ್ರವು ಕುರೂಪ ಅಸುಂದರ (Clumsy) ವೆಂದು ಪ್ರತೀತವಾಗುತ್ತ... ಯಂತ್ರದ ಸ್ಥೂಲತೆಯು ಗಡುತರವು. (Thickness) ಶಲ್ಯಾನುಸಾ... ವಾಗಿರತಕ್ಕುದು. ೨) ಅಸಾರ– ಅಶುದ್ಧ ಲೋಹಾದಿ ಘಟಿತಂ, (ಡಲ್ಹಣಃ) ಯಂತ್ರಗಳು ಉತ್ತಮ ಸಾರವುಳ್ಳ (ಪಕ್ವ– Durable) ಲೋಹದಿಂ... ಮಾಡತಕ್ಕುದು. ಇಲ್ಲದಿದ್ದರೆ ಅವು ತೀವ್ರ ಒಡೆದು ಹೋಗುತ್ತವೆ. ಅಸಾ... ರದ ಮತ್ತೊಂದು ಅರ್ಥವು ಅತಿ ಸ್ಥೂಲ ಎಂಬುದಕ್ಕೆ ವಿರುದ್ಧವಾಗಿ ತನು... ಅಥವಾ (Thin) ಎಂದಾಗುತ್ತದೆ. ೩) ಅತಿದೀರ್ಘ– ಅತ್ಯಂತ ಉದ್ದ...

ವಾದ ಯಂತ್ರಗಳೂ ಚೆನ್ನಾಗಿ ಆಗುವದಿಲ್ಲ. ಹೇಗೆಂಬುದನ್ನು ನಾವು ಈ ಹಿಂದೆ ಹೇಳಿದ್ದೇವೆ .೪) ಅತಿಹ್ರಸ್ವ–ಬಹಳ ಸಣ್ಣವು ಹೀಗೂ ಇರಬಾರದು. ೫) ಅಗ್ರಾಹಿ— ಯಾವು ಶಲ್ಯವನ್ನು ಹಿಡಿದುಕೊಳ್ಳುವದಿಲ್ಲವೋ ಅವು ಹೀಗಿದ್ದರೆ ಅಂಥವುಗಳ ಆವಶ್ಯಕತೆ ಯಾದರೂ ಏನಿರುತ್ತದೆ? ೬) ವಿಷಮಗ್ರಾಹಿ– ಯಾವು ವಿಷಮ ಅರ್ಥಾತ್ ಶಲ್ಯದ ಒಂದು ಭಾಗವನ್ನು ಹಿಡಿಯುವದು. ಸಂಪೂರ್ಣ ಶಲ್ಯವನ್ನು ಹಿಡಿಯಲಿಕ್ಕಾಗದಂಥವು. ೭) ವಕ್ರ— ಸೊಟ್ಟ (Curved) ಅರ್ಥಾತ್ ಯಂತ್ರವು ಎಲ್ಲಿ ಸರಿಯಾದದ್ದು (ಸೀದಾ) ಇರಬೇಕೋ ಅಲ್ಲಿ ವಕ್ರ (ಸೊಟ್ಟ) ಇರುವಂಥವೂ ಅಪ್ರಶಂಸನೀಯುವಾಗಿವೆ. ೮) ಶಿಥಿಲ– ಸಡಿಲವಾದುವು (Loose) ಅಥವಾ 'ಪೀಡನಾಕ್ಷಮಂ' ಹಿಡಿಯಲಿಕ್ಕೆ ಅಯೋಗ್ಯವಾದವು (ಡಲ್ಹಣಃ) ೯) ಅತ್ಯುನ್ನತ-ಯಾವುದರ ಒಂದು ಭಾಗ ಅಥವಾ ಹೆಚ್ಚು ಭಾಗ (ಮೂಲ, ಮುಖ, ಕೀಲ, ಇತ್ಯಾದಿಗಳು) ಬಹಳ ಎತ್ತರವಾಗಿರುವದು. ೧೦) ಮೃದುಕೀಲ– ಮೃದು ಅಥವಾ ದುರ್ಬಲ ಕೀಲ ಉಳ್ಳವು. ಒತ್ತುವದರಿಂದ ಅಥವಾ (ಶಕ್ತಿ) ಹಾಕುವದರಿಂದ ಕೀಲವು ಮುರಿಯುಬಹುದು ಅಥವಾ ಫಲಕಗಳೆರಡೂ ಬೇರೆಯಾಗಬಹುದು. ೧೧) ಮೃದುಮುಖ– ಮೃದುವಾದ ಮುಖಉಳ್ಳವು. ಮುಖವು ದುರ್ಬಲವಾದರೆ ಶಲ್ಯವನ್ನು ಹೇಗೆ ಹಿಡಿಯುವದು? ೧೨) ಮೃದುಪಾಶ– ಕೋಮಲವಾದ ಪಾಶಉಳ್ಳವು. ಈ ದೋಷವು ಬಹುಶಃ ಸ್ವಸ್ತಿಕ ಯಂತ್ರಗಳಲ್ಲಿರುತ್ತದೆ. ಪರಂತು ಇದರಲ್ಲಿಯ ಕೆಲವು ಸಂದಂಶ, ಶಲಾಕಾ, ನಾಡೀ ಯಂತ್ರ ಇತ್ಯಾದಿಗಳಲ್ಲಿಯೂ ಇರಬಲ್ಲವು. ಹೇಗೆ ಅತಿಸ್ಥೂಲ, ವಕ್ರ, ಅಸಾರಾದಿಗಳಿರುತ್ತವೆಯೋ ಹಾಗೆ ಇರುತ್ತವೆ.

> ಏತೈರ್ದೋಷೈರ್ವಿನಿರ್ಮುಕ್ತಂ ಯಂತ್ರಮಷ್ಟಾದಶಾಂಗುಲಮ್।
> ಪ್ರಶಸ್ತಂ ಭಿಷಜಾ ಜ್ಞೇಯಂ ತದ್ಧಿ ಕರ್ಮಸು ಯೋಜ
> ಯೇತ್ ॥೨೦॥ ಸು. ಸೂ. ಅ. ೭

ಇಂಥ ದೋಷಗಳಿಂದ ಮುಕ್ತ (ವರ್ಜಿತ) ವಾದ ಯಂತ್ರಗಳು ೧೮ ಅಂಗುಲ ಉದ್ದವಾದವು ಪ್ರಶಸ್ತ (ಯೋಗ್ಯ) ವೆಂದು ತಿಳಿದು ವೈದ್ಯನು ಉಪಯೋಗದಲ್ಲಿ ತರತಕ್ಕುದು.

# ದೃಶ್ಯಾದೃಶ್ಯ ಭೇದದಿಂದ ಯಂತ್ರಪ್ರಯೋಗವು

ದೃಶ್ಯಂ ಸಿಂಹಮುಖಾದ್ಯೈಸ್ತು ಗೂಢಂ ಕಂಕಮುಖಾದಿಭಿಃ।
ನಿರ್ಹರೇತ್ತು ಶನೈಃ ಶಲ್ಯಂ ಶಸ್ತ್ರಯುಕ್ತಿವ್ಯಪೇಕ್ಷಯಾ ॥೨॥
ಸು. ಸೂ. ೭।

ಯಾವ ಶಲ್ಯಗಳು ದೃಶ್ಯ [Visible] ವಾಗಿವೆಯೋ ಅರ್ಥಾ
ಹೊರಗೆ ತೆರೆಯಲಾಗಿದೆಯೋ (ಅಂದರೆ ಕಾಣಿಸುತ್ತವೆಯೋ) ಅವ
ಯಂತ್ರಗಳ [ಯೋಜನೆ] ಯುಕ್ತಿಯನ್ನು ಬಲ್ಲ ವೈದ್ಯನು ಸಿಂಹಮುಖ
ಯಂತ್ರಗಳಿಂದ ತೆಗೆಯತಕ್ಕದು. ಮತ್ತು ಗೂಢ [Deep] ಅಥ
ಅದೃಶ್ಯ ಶಲ್ಯವನ್ನು ಕಂಕಮುಖ ಯಂತ್ರ ಇತ್ಯಾದಿಗಳಿಂದ ತೆಗೆಯತಕ್ಕ
ಈ ವಿಷಯದಲ್ಲಿ ಈ ಮೊದಲೇ ಪ್ರಕಾಶ ಮಾಡಿ [ಸವಿಸ್ತಾರವಾ
ಹೇಳಿದ್ದೇವೆ.

## ಪ್ರಶ್ನೆ ಸೂಚಿಕೆ

೧ ಯಂತ್ರ ಮತ್ತು ಶಸ್ತ್ರಗಳಲ್ಲಿ ಭೇದವೇನು ? ಉದಾಹರ
ಸಹಿತ ವಿವರಿಸಿರಿ

೨ ಯಂತ್ರಗಳು ಎಷ್ಟು ಪ್ರಕಾರದಲ್ಲಿ ಭೇದವಿರುತ್ತವೆ. ಅವುಗ
ಪ್ರಕಾರ ಭೇದದಿಂದ ಸಂಖ್ಯಾ, ನಾಮ, ಕರ್ಮಗಳನ್ನು ನಿರೂಪಿಸಿ.
ಯಂತ್ರ ಶಬ್ದ ನಿರುಕ್ತಿಯನ್ನೂ ಹೇಳಿರಿ. ಅವುಗಳಲ್ಲಿ ಭಾಗ ವಿಶೇ
ಗಳೆಷ್ಟು ? ಅವುಗಳ ಕೆಲಸವೇನು ?

೩ ಸ್ವಸ್ತಿಕ ಯಂತ್ರವೆಂದರೇನು? ಅದು ಎಷ್ಟು ವಿಧವಾಗಿದೆ? ಸಿಂ
ಮುಖ ಕಂಕಮುಖ ಇವುಗಳಲ್ಲಿ ಪರಸ್ಪರ ಭೇದ ಪೂರ್ವಕವಾಗಿ ವರ್ಣ
ಮಾಡಿರಿ. ಅವುಗಳ ಆಕೃತಿಯನ್ನೂ ಚಿತ್ರಿಸಿರಿ.

೪ ಧಮನೀಗ್ರಾಹೀ ಎಂಬುವ ಯಂತ್ರದ ಪ್ರಯೋಜನವೇನು?
ಅದರ ಸ್ವರೂಪವನ್ನು ಪ್ರದರ್ಶಿಸಿರಿ ?

೫ ನಾಡೀ ಯಂತ್ರಗಳೆಷ್ಟು ಮತ್ತು ಅವುಗಳ ಪ್ರಯೋಜನವೇನು?

೬ ಯಾವದಾದರೂ ನಾಲ್ಕು ಶಲಾಕಾ ಯಂತ್ರಗಳ ಸ್ವರೂಪ ಮತ್ತು ಪ್ರಯೋಗ ವಿಧಿಯನ್ನು ವಿಶದಿಸಿರಿ.

೭ ಉಪ ಯಂತ್ರವಾವದು ? ಅದರ ಸಂಖ್ಯೆ, ನಾಮ, ಕರ್ಮ ಇವುಗಳನ್ನು ಬರೆಯಿರಿ. ಅಶ್ವಕಂಟಕ, ಷ್ಠೀವನ, ಹರ್ಷ, ಮುಖ, ಅಂತ್ರ ನಖ, ಬಾಲ [ಕೂದಲು] ಈ ಪ್ರಕಾರವಾದ ಉಪಯಂತ್ರಗಳಿಂದ ಶಲ್ಯೋದ್ಧರಣದಲ್ಲಿ ಪ್ರಯೋಜನೆಯು ಹೇಗೆ ಸಾಧ್ಯವಾಗುತ್ತದೆ? ಶಲ್ಯವೆಂದರೇನು?

೮ ಪೂರಣ, ವ್ಯೂಹನ, ಪೀಡನ, ಮಾರ್ಗವಿಶೋಧನ, ಚೂಷಣ ಏಷಣ, ಪ್ರಧಮನ ಇವುಗಳ ಯಂತ್ರ ಕರ್ಮಗಳನ್ನು ಶಾಸ್ತ್ರ ರೀತಿಯಾಗಿ ವ್ಯಾಖ್ಯಾನಿಸಿರಿ. ಯಾವ ಕಾರ್ಯದಲ್ಲಿ ಯಾವ ಯಂತ್ರ ವಿಶೇಷದಿಂದ ಸಹಾಯವು ದೊರೆಯುತ್ತದೆ ಎಂಬುದನ್ನೂ ಸಹ ನಾಮ ಮಾತ್ರದಿಂದ ಬರೆಯತಕ್ಕದು.

೯ ಯಂತ್ರ ದೋಷಗಳೇನು ಮತ್ತು ಎಷ್ಟು ? ಪ್ರಶಸ್ತವಾದ ಯಂತ್ರ ಲಕ್ಷಣವನ್ನು ಹೇಳಿರಿ.

೧೦ ಕೆಳಗೆ ಬರೆದ ಯಂತ್ರಗಳಲ್ಲಿ ಪ್ರಕಾರ ಭೇದವನ್ನೂ ಆಕೃತಿಯನ್ನೂ ಕರ್ಮಗಳನ್ನೂ ಚಿತ್ರ ಸಹಿತವಾಗಿ ವರ್ಣಿಸಿರಿ.

ಶ್ಯೇನಮುಖ, ಪಿತ್ತಾಶ್ಮರೀ ತಾಲವು, ಮುಚುಂಡಿಯು, ದಂತ ಪಾತಕವು, ಸರ್ಪಫಣೀ, ಗಂಡೂಪದಮುಖ ಶಲಾಕೆಯು, ಸಂದಂಶನೀ, ಮೂತ್ರಮಾರ್ಗ ವಿಶೋಧಿನೀ ಶಲಾಕೆಯು.

೧೧ "ಕ್ರಿಯಾಸೌಕರ್ಯಾರ್ಥಂ" "ಶೇಷಾಂಗ ಪರಿ ರಕ್ಷಾಯಾಂ" "ಆಯಸಾನಿಚ ಭೂರಿಶಃ" ಈ ಪ್ರಕಾರವಾದ ಶಾಸ್ತ್ರ ವಚನತ್ರಯಗಳನ್ನು ಚನ್ನಾಗಿ ವ್ಯಾಖ್ಯಾನಿಸಿರಿ.



# ೨ನೇ ಅಧ್ಯಾಯ

## ಶಸ್ತ್ರ ಪ್ರಕರಣವು

## Sharp Instruments.

**ಶಸ್ತ್ರ ಗಣನೆ:—** ವಿಂಶತಿಃ ಶಸ್ತ್ರಾಣಿ, ತದ್ಯಥಾ—೧) ಮಂಡಲಾ ೨) ಕರಪತ್ರ ೩) ವೃದ್ಧಿಪತ್ರ, ೪) ನಖಶಸ್ತ್ರ, ೫) ಮುದ್ರಿಕಾ, ೬) ಉತ್ಪ ಪತ್ರ, ೭) ಅರ್ಧಧಾರ, ೮) ಸೂಚೀ, ೯) ಕುಶಪತ್ರ, ೧೦) ಆಟೀಮು ೧೧) ಶರಾರೀ ಮುಖ, ೧೨) ಅಂತರ್ಮುಖ, ೧೩) ತ್ರಿಕೂರ್ಚ ೧೪) ಕುಠಾರಿಕಾ, ೧೫) ವ್ರೀಹಿಮುಖ, ೧೬)ಆರಾ, ೧೭) ವೇತಸಪತ್ರ ೧೮) ಬಡಿಶ, ೧೯) ದಂತಶಂಕು, ೨೦) ಏಷಣ್ಯ ಇತಿ ॥೩॥ (ಸು.ಸೂ.೮.

ಶಸ್ತ್ರಗಳು ೨೦ ಇರುತ್ತವೆ. ಮೇಲೆ ಬರೆದ ಅವುಗಳ ಹೆಸರು ಮತ್ತು ಹೆಸರಿನ ಮುಂದಿನ ಅಂಕೆಗಳಿಂದ ಸ್ಪಷ್ಟವಿದೆ. ಇಪ್ಪತ್ತು ಸಂಖ್ಯೆಯು ಕೇವ ಪ್ರಕಾರವಾಚಕವಿದೆ. ಒಂದೊಂದು ಪ್ರಕಾರಗಳಲ್ಲಿ ಪುನಃ ಎಷ್ಟೋಬಗೆ ಶಸ್ತ್ರಗಳಾಗುತ್ತವೆ. *

ತೇಷಾಂ ನಾಮಾಭಿರೇವಾಕೃತಯಃ ಪ್ರಾಯೇಣ
ವ್ಯಾಖ್ಯಾತಾಃ ॥೬॥ ಸು. ಸೂ. ೮.೮

---

* ಶ್ರೀ ವಾಗ್ಭಟರು ಸೂತ್ರಸ್ಥಾನ ಅಧ್ಯಾಯ ೨೬ ರಲ್ಲಿ ೨೬ ಶಸ್ತ್ರಗ ವರ್ಣನೆಯನ್ನು ಮಾಡಿದ್ದಾರೆ. ಇದರಿಂದ ಆಯುರ್ವೇದದ (Progressive ವೃದ್ಧಿಶೀಲತೆ) ಪ್ರಗತಿಯು ಸಿದ್ಧವಾಗುತ್ತದೆ. ಅಭ್ಯಾಸ, ಅನುಭವ ಮತ್ತು ಆವಶ್ಯಕತೆಯ ಅನುಸಾರವಾಗಿ ಇದರ ಸಂಖ್ಯೆಯು ಬೆಳೆಯಬಲ್ಲದು. ಹೀ ಆಧುನಿಕ ಶಸ್ತ್ರ ಸಂಭಾರದಲ್ಲಿ ನಾವು ಸಂಖ್ಯಾತೀತ ಶಸ್ತ್ರಗಳನ್ನು ನೋಡು ತ್ತೇವೆ. "ಷಡ್ ವಿಂಶತಿಃ ಸುಕರ್ಮಾರೈರ್ಘಟಿತಾನಿಯಥಾವಿಧಿ। ಶಸ್ತ್ರಾ ರೋಮವಾಹೀನಿ ಬಾಹುಲ್ಯೇನಾಂಗುಲಾನಿ ಷಟ್ ॥೨॥ ಸುರೂಪಾ ಸುಧಾರಾಣಿ ಸುಗ್ರಹಾಣಿಚ ಕಾರಯೇತ್। ಅಕರಾಲಾನಿ ಸುಧ್ಮಾ ಸುತೀಕ್ಷ್ಣವರ್ತಿತೇಽಯಸಿ॥೩॥ ಸಮಾಹಿತ ಮುಖಾಗ್ರಾಣಿ ನೀಲಾಂಭೋ ಜಛವೀನಿಚ । ನಾಮಾನುಗತ ರೂಪಾಣಿ ಸದಾ ಸನ್ನಿಹಿತಾನಿಚ ॥೪

## ಅಥರ್ವಣವೇದ

ಋಚೋ ಅಕ್ಷರೇಪರಮೇವ್ಯೋಮನ್ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ। ಯಸ್ತನ್ನ ವೇದಕಿಮೃಚಾಕರಿಷ್ಯತಿಯ ಇತ್ತ ದ್ವಿದುಸ್ತ ಇಮೆ ಸಮಾಸತೇ॥ (ಋಗ್ವೇದ ೧-೧೬೪-೩೯ ಅಥರ್ವರ್ವವೇದ ೯-೧೦-೧೮)

ಪರಮ ಆಕಾಶದಲ್ಲಿಯ ಎಲ್ಲ ದೇವತೆಗಳು ವೇದ ಮಂತ್ರಗಳ ಅಕ್ಷರಗಳಲ್ಲಿ ಋಚಿಗಳಲ್ಲಿರುವರು. ಇದನ್ನು ಚನ್ನಾಗಿ ತಿಳಿದುಕೊಳ್ಳಬೇಕು. ಸಂದರ್ಭಾನುಸಾರವಾಗಿ ಅರ್ಥ ಮಾಡಿಕೊಳ್ಳಬೇಕು. ಭಾವಾರ್ಥಕ್ಕೆ ಹೆಚ್ಚು ಗಮನ ಕೊಡಬೇಕು. ಮಾನವನ ಹಿತಕ್ಕಾಗಿಯೇ ಎಂದು ಶ್ರದ್ಧಾ ಭಾವದಿಂದ ಪ್ರಾರ್ಥನೆ ಮಾಡಬೇಕು.

ಪ್ರಾಣಿಗಳ ಶರೀರದಲ್ಲಿ ಎಲ್ಲ ಕಡೆಗೂ ಹೆಚ್ಚು ಕಡಿಮೆ ಚೈತನ್ಯವಿರುತ್ತದೆ. ತೈಜಸ್ಸು ಉಂಟು. ಅವು ನಾಡಿ ಧಮನಿ ಸಿರಾ ಸ್ರೋತಸ್ಸು ಅಸ್ಥಿ ಸಂಧಿ ಮೊದಲಾದ ಎಲ್ಲ ಭಾಗಗಳಲ್ಲಿ ಒಂದು ಸೂಜಿಯ ಮೊನೆಯಷ್ಟು ಭಾಗ ಬಿಡದೆ ಎಲ್ಲ ಕಡೆಯಲ್ಲಿಯೂ ಚೈತನ್ಯ ತೇಜಸ್ಸುಗಳು ವ್ಯಾಪಿಸಿರುತ್ತವೆ. ಅವಕ್ಕೆಲ್ಲ ದೇವಸ್ವರೂಪ ಕಲ್ಪಿಸಿದ್ದುಂಟು ಮತ್ತು ಪ್ರಾರ್ಥಿಸಿದ್ದುಂಟು.

ಶಸ್ತ್ರ ಕರ್ಮ ಮಾಡುವಾಗ ಪ್ರಾರ್ಥನೆಯಿಲ್ಲದೆ ಯಾವ ಕರ್ಮವನ್ನೂ ಮಾಡುವಂತಿಲ್ಲ. ದೇವ ಎಂದು ಪ್ರತಿಯೊಂದು ಭಾಗದ ಪ್ರಾರ್ಥನೆ ಮಾಡಿ ಇಂಥ ರೋಗ ನಿವಾರಣೆಗಾಗಿ ಇಂಥದೇ ಒಂದು ಸ್ಥಳದಲ್ಲಿಯ ಛೇದನ, ಭೇದನ, ವ್ಯಥನ, ನಿಷ್ಕಾಶನ, ಆಹರಣ ಮುಂತಾದ್ದರ ಒಂದು ಕಾರ್ಯವನ್ನು ಮಾಡುತ್ತೇನೆಂದು ಆಯಾ ಭಾಗಪ ದೇವರನ್ನುದ್ದೇಶಿಸಿದ ಪ್ರಾರ್ಥನೆಯ ಮಂತ್ರಗಳನ್ನು ಉಚ್ಚರಿಸಿ ಶಸ್ತ್ರ ಕರ್ಮವನ್ನು ಮಾಡಬೇಕು.

ಅಥರ್ವಣ ವೇದದಲ್ಲಿಯೂ ಕೂಡ ಆಯುರ್ವೇದದ ವಿಷಯದ ಅನೇಕ ಮಂತ್ರಗಳುಂಟು. ಅನೇಕ ರೋಗಗಳ ಚಿಕಿತ್ಸೆಯುಂಟು. ಆದರೆ ಅಲ್ಲಿಯೂ ಕೂಡ ಶಸ್ತ್ರ ಕರ್ಮಕ್ಕೆ ಗೌಣತ್ವವುಂಟು. ಯಜ್ಞ ಯಾಗಾದಿಗಳಿಂದ ಶರೀರದ ಅಂಗ ಪ್ರತ್ಯಂಗಗಳ ಜ್ಞಾನ ಮಾಡಿಕೊಂಡಿರುವದುಂಟು. ಪಶ್ವಾದಿಗಳ ವಿಚ್ಛೇದನ ಮಾಡಿ ಹಸ್ತಕ್ಕೆ ಕೌಶಲ್ಯವುಂಟಾಗುವಂತೆಹವನ ಮಾಡಿಕೊಂಡಿರಲಿಕ್ಕೆ ಸಾಕು ಎಂದೆನಿಸುತ್ತದೆ.

---

ಅವುಗಳ ಆಕೃತಿಯು ಬಹುಶಃ ಹೆಸರಿನಿಂದ ಸ್ಪಷ್ಟವಾಗುತ್ತದೆ.

ವಕ್ತವ್ಯ:— ಹೇಗೆ ಈ ಹಿಂದೆ ಯಂತ್ರಗಳನಾಮಕರಣ ವಿಧಿಯು ಸಂಬಂಧದಲ್ಲಿ ಬರೆದಿದೆ— ಅದೇ ಭಾವವೇ ಇಲ್ಲಿಯೂ ಹೃದಯಾಂಕಿತ ಮಾಡತಕ್ಕುದು. ಋಷಿಗಳು ತಮ್ಮ ಹೆಸರಿನ ಮೇಲೆ ಶಸ್ತ್ರಗಳ ಪ್ರಸಿದ್ಧಿಯನ್ನು ಮಾಡದೇ ಯಾವದರಿಂದ ಆಯಾ ಶಾಸ್ತ್ರಗಳ ಆಕೃತಿಯು ತೀವ್ರ ತಿಳಿಯಲ್ಪಡುವದೋ ಅಂಥ ನಾಮಗಳನ್ನು ಶಸ್ತ್ರಗಳಿಗೂ ಇಟ್ಟಿದ್ದಾರೆ. ಕೆಲವು ಹೆಸರುಗಳು ಲಕ್ಷಣಾತ್ಮಕವಾಗಿವೆ. (Descriptive) ಹೇಗೆಂದರೆ– ಮಂಡಲಾಗ್ರ, ಅರ್ಧಧಾರಾ-ಇತ್ಯಾದಿಗಳು. ಕೆಲವು ನಾಮಗಳು ಅಂಗವಾಚಕ ಇರುತ್ತವೆ. ಅರ್ಥಾತ್ ಯಾವ ಅಂಗ ಅಥವಾ ಭಾಗದ ಮೇಲೆ ಅವು ಕಾರ್ಯ ಮಾಡುತ್ತಿವೆಯೋ; ಅದರ ಹೆಸರನ್ನು ಅದರ ಸಂಗಡ ಜೋಡಿಸಲಾಗುತ್ತಿದೆ. ಹೇಗೆಂದರೆ— ನಖಶಸ್ತ್ರ, ದಂತಶಂಕು, ಇತ್ಯಾದಿಗಳು, ಕೆಲವು ವನಸ್ಪತಿಗಳ ಮತ್ತು ಪಶುಪಕ್ಷಿಗಳ ಹೆಸರಿನ ಮೇಲೆ ಪ್ರಸಿದ್ಧವಿವೆ. ಹೇಗೆ– ವೃದ್ಧಿಪತ್ರ, ಕುಶಪತ್ರ, ಉತ್ಪಲಪತ್ರ, ಆಟೀಮುಖ, ಶರಾರೀಮುಖ ಇತ್ಯಾದಿಗಳು. ಕೆಲವು ಹೆಸರುಗಳು ಲೌಕಿಕ (Popular) ವಾಗಿರುತ್ತವೆ. ಅವನ್ನು ಎಲ್ಲ ಜನರೂ ತಿಳಿಯುತ್ತಾರೆ. ಹೇಗೆಂದರೆ– ಬಡಿಶ, ಆರಾ, (ಆರವು.) ಕುಠಾರಿಕಾ (ಕೊಡಲಿ) ಇತ್ಯಾದಿಗಳು. ಇದಕ್ಕೂ ಹೆಚ್ಚಿನ ಸ್ಪಷ್ಟೀಕರಣದ ದೆಶೆಯಿಂದ ನಾವು ಈಗ ಕೆಳಗೆ ಕ್ರಮವಾಗಿ ಶಸ್ತ್ರಗಳ ವರ್ಣನೆಯನ್ನು ಮಾಡುತ್ತೇವೆ

---

ಫಲಾನ್ಯೇಕೈಕಶೋಽಪಿಚ । ಪ್ರಾಯೋ ಶ್ವೋನ್ಮಾನಾರ್ಧ-ಚತುರ್ಥಾಂಶ ದ್ವಿತ್ರಾಣಿಯುಂಜೀತ ತಾನಿಸ್ಥಾನ ವಿಶೇಷತಃ ॥೧೫॥ ಅ ಹೃ. ಸೂ. ಅ. ೨೬ ಶಸ್ತ್ರಗಳು ೨೬ ಇರುತ್ತವೆ. ವಿಧಿ ಪ್ರಕಾರವಾಗಿ ಉತ್ತಮ ಕೆಲಸಗಾರ (Expert Mechanics) ರಿಂದ ಮಾಡಿಸಿದವೂ, ಶೋಮ ಭೇದೀ ಉತ್ತಮ ರೂಪವುಳ್ಳವೂ, ತೀಕ್ಷ್ಣ ಮತ್ತು ಬಹುಶಃ ೬ ಅಂಗುಲ ಉದ್ದ, ಮತ್ತು ಸುಂದರವಾದ ಧಾರೆ [ತುದಿ] ಯುಳ್ಳವೂ [Sharp-edged] ಮಾಡಿಸತಕ್ಕ ಹಿಡಿಕೆಯುಳ್ಳವೂ, [With hand some handles] ಉತ್ತಮ ಶಸ್ತ್ರವಾಗಿವೆ. ಅಕರಾಲ [ಕುರೂಪವುಳ್ಳವು ಆಗಬಾರದು] ಲೋಹ [ಉಕ್ಕಿನಿಂದ Fine Steel] ದಿಂದ ಮಾಡಿರತಕ್ಕುದು.

೧) ಮಂಡಲಾಗ್ರ (Sharp spoon) "ಮಂಡಲ (ವೃತ್ತಾಕಾರ) ಮಿವಾಗ್ರಂ ಯಸ್ಯ ತತ್ ಮಂಡಲಾಗ್ರಂ" (ಡಲ್ಹಣಃ) ಯಾವುದರ ಅಗ್ರ ಭಾಗವು (ತುದಿಯು) ಗೋಲಾಕಾರ (Round or oval) ವಾಗಿರುತ್ತ ದೆಯೋ ಅದಕ್ಕೆ ಮಂಡಲಾಗ್ರ § ವೆನ್ನುತ್ತಾರೆ.

೨) ಮಂಡಲ:- ಆಂಗ್ರೇಜಿಯಲ್ಲಿ ಇದಕ್ಕೆ ಕರ್ತಾರನ (ಮಾಡಿದವನ) ಹೆಸರಿನ ಮೇಲೆ Volk man's sharp spoon (ವಾಕಮೈನನ ತೀಕ್ಷ್ಣ ಚಮಚೆ) ಎಂದೆನ್ನುತ್ತಾರೆ. ಇದರ ಶ್ರೇಯಸ್ಸು ಯಾವನು ವಾಕಮನಿಗಿಂತ ಪೂರ್ವದಲ್ಲಿ ಸಾವಿರಾರು ವರ್ಷ ಮೊದಲೇ ಆವಿಷ್ಕಾರಮಾಡಿರುವನೋ ಅಂಥ ಧನ್ವಂತರಿ ಅಥವಾ ಸುಶ್ರುತರಿಗೆ ದೊರೆಯಬೇಕಾಗಿತ್ತು. ಈ ಶಸ್ತ್ರಕ್ಕೆ ಆಂಗ್ರೇ ಜಿಯಲ್ಲಿScraper (ಕೆತ್ತುವ ಶಸ್ತ್ರ ) ವೆಂದೂ ಸಹ ಎನ್ನುವದುಂಟು. ಇದು ಕ್ರಿಯಾತ್ಮಕ ನಾಮವಾಗಿದೆ. ಎಲುವನ್ನು ಕೆತ್ತುವದರಿಂದ (ಕಿತ್ತುವದರಿಂದ) ಇದಕ್ಕೆ Bone scoop or bone Scraper ಎಂದೂ ಎನ್ನುವದುಂಟು. ಮಂಡಲಾಗ್ರ ಕೆಲಸವು ಸುಶ್ರುತರು "ಛೇದನೆ ಲೇಖನೇಚ" ಹೀಗೆಂದು ಬರೆ ದಿದ್ದಾರೆ. ಅರ್ಥಾತ್ ಕತ್ತರಿಸುವ ಮತ್ತು ಕೆತ್ತುವ (Scarifying) ಮಾಂಸಾಂಕುರಗಳನ್ನು ಕತ್ತರಿಸುವದು ಮತ್ತು ಎಲುವನ್ನು ಕೆತ್ತುವದು. ಆಂಗ್ರೇಜಿಯಲ್ಲಿ ಇದಕ್ಕೆ Curette ಎಂದೂ ಅನ್ನುತ್ತಾರೆ. ಹಾಗೆ Uterine Curette (ಗರ್ಭಾಶಯದ ಮುಖವನ್ನು ಕೆತ್ತುವ) ಇದರ ಉದ್ದಳತೆಯು ಸುಶ್ರುತರು ೬ ಅಂಗುಲ (೪ಇಂಚು) ವೆಂದು ಬರೆದಿದ್ದಾರೆ.

---

ಅವುಗಳ ಮುಖಾಗ್ರವು [ಫಲ-Blade] ಚನ್ನಾಗಿ ಮಾಡಿದೆಯೋ ನೀಲೋತ್ಪಲದಂಥ ಹೊಳೆಯುವ [Glistering] ಯಾವುಗಳ ಆಕೃ ತಿಯು ನಾಮಾನುಸಾರವಾಗಿದೆಯೋ, ಯಾವ ಸದಾಕಾಲದಲ್ಲಿ ಸಿದ್ಧವಾಗಿ ಇರುತ್ತವೆಯೋ, ಎಂಬುದಾಗಿರಬೇಕು. ಬೇರೆಪ್ರಕಾರದ ಶಸ್ತ್ರಗಳ ಪ್ರಮಾಣ ದಂತೆ ಅದರ ಅರ್ಧ [½ಭಾಗ], ಚತುರ್ಥಾಂಶ [¼]ಇತ್ಯಾದಿ ಫಲಗಳುಳ್ಳವು, ಸ್ಥಾನಾನುಸಾರವಾಗಿ ೨-೩ ಶಸ್ತ್ರಗಳಿರಬೇಕು. ಈ ಶಸ್ತ್ರಗಳ ಗುಣವನ್ನು ವಾಗ್ಭಟರು ಅಧ್ಯಾಯಾರಂಭದಲ್ಲಿಯೇ ಹೇಳಿ ಬಿಟ್ಟಿದ್ದಾರೆ.

† "ಮಂಡಲಾಗ್ರಂ ಫಲೇತೇಷಾಂ ತರ್ಜನ್ಯಂತರ್ನಖಾಕೃತಿ ಛೇದನೇ ಲೇಖನೇಯೋಜ್ಯಂ ಪೋಥಕೀ ಶುಂಡಿಕಾದಿಷು ॥೬॥ [ಅ. ಹೃ

ಇದು ಸ್ಥಾನಾನುಸಾರವಾಗಿ ಹೆಚ್ಚಿಸಲೂ ಬರುತ್ತದೆ.

ಮಂಡಲಾಗ್ರ (Sharp spoon) ದ ವಿಷಯದಲ್ಲಿ ಈ ಕೆಳಗಿನ ವಿಷಯಗಳು ಸ್ಮರಣೀಯವಾಗಿವೆ.

The edges of the Spoon are sharp for the purpose of curetting. The spoon may be round or oval and is mounted on a long handle.

USES:— To scrape [i] chronic ulcers with hard or thickened edges and the base fixed to underlying structures [ii] anal fistula, [iii] tubercular and bone sinuses– A guide to surgical instruments

ಚಮಚೆಯು ತುದಿಯಲ್ಲಿ ಕತ್ತರಿಸುವ ಮತ್ತು ಕೆತ್ತುವ ಕಾರಣದಿಂದ ತೀಕ್ಷ್ಣವಾಗಿರತಕ್ಕುದು. ಚಮಚೆಯು ದುಂಡಗೆ ಅಥವಾ ವೃತ್ತಾಯತ

---

ಸೂ. ಅ. ೨೬] ಮಂಡಲಾಗ್ರದ ಫಲ [ತುದಿ] ದ ಆಕೃತಿಯು ತರ್ಜನೀ [Index finger] ಬೆರಳಿನ ನಖದ ಅಭ್ಯಂತರಿಕ ಭಾಗದ ಸದೃಶವಾಗಿರ ತಕ್ಕುದು ಮತ್ತು ಪ್ರಯೋಗವು [Granular lids] ಶುಂಡೀ uvula ಇತ್ಯಾದಿಗಳನ್ನು ಕತ್ತರಿಸುವ ಅಥವಾ ಕೆತ್ತುವ ಕೆಲಸಕ್ಕೆ ಬರುತ್ತದೆ. Nasal curette ವೂ ಸಹ ಒಂದು ತರಹದ ಮಂಡಲಾಗ್ರವೇ ಆಗಿದೆ.

* "ಛೇದೇಽಸ್ಥ್ನಾಂ ಕರಪತ್ರಂತು, ಖರಧಾರಂ ದಶಾಂಗುಲಮ್। ವಿಸ್ತಾರೆ, । ದ್ವ್ಯಂಗುಲಂ ಸೂಕ್ಷ್ಮದಂತಂ ಸುತ್ಸರುಬಂಧನಮ್ ॥೧೮॥ [ಅ. ಹೃ. ಸೂ. ಅ. ೨೬] ಅರ್ಥ— ಕರಪತ್ರವು ಎಲುವುಗಳನ್ನು ಕತ್ತರಿಸ ಲಿಕ್ಕೆ ಪ್ರಯುಕ್ತವಾಗುತ್ತದೆ. ಇದು ಖರಧಾರ [ತೀಕ್ಷ್ಣಧಾರೆ – ತುದಿ ಯುಳ್ಳವು] ೧೦ ಅಂಗುಲ ಉದ್ದ, ಎರಡು ಅಂಗಲ ಅಗಲ ಮತ್ತು ಸಂಣ ಹಲ್ಲುಗಳಿಂದ ಯುಕ್ತವಾದವುಗಳೂ ಮತ್ತು ಸುಂದರ ಮುಷ್ಟಿ [Handle- ಹಿಡಿಕೆ] ಯಿಂದ ಜೋಡಿಸಲ್ಪಟ್ಟವೂ ಆಗಿರಬೇಕು. ವಾಗ್ಭಟರ ಈ ಲಕ್ಷಣ ಗಳು ಅತ್ಯಂತ ಸುಂದರವಾಗಿವೆ.

(ತತ್ತಿಯ ಆಕಾರದಂತೆ) ಮತ್ತು ಒಂದು ಉದ್ದವಾದ ಹಿಡಿಕೆಯಲ್ಲಿ ಹಚ್ಚಿದಂಥದು ಇರತಕ್ಕುದು.

ಪ್ರಯೋಗ:— (ಕ) ದುಷ್ಟವ್ರಣ ಅಂದರೆ ಯಾವ ವ್ರಣದ ತುದಿಯು ಅತ್ಯಂತ ಕಠೋರವೂ ಮತ್ತು ದಪ್ಪವಾಗಿರುವದೋ ಮತ್ತು ಕೆಳಗಿನ ರಚನೆಗಳಿಗೆಲ್ಲ ಅಂಟಿಕೊಂಡಿದೆಯೋ ಅಂಥದುಂ ಬ) ಭಗಂದರ, ಗ) ಕ್ಷಯಾತ್ಮಕ ಮತ್ತು ಆಸ್ಥಿಗತ ನಾಡೀವ್ರಣ, ಇತ್ಯಾದಿಗಳನ್ನು ಕೆತ್ತುವದು. (ಲೇಖನ ಕರ್ಮ‌ವು) ಕೆಲವು ಡಾಕ್ಟರಜನರು ಇವಕ್ಕೆ Round hard Knife or circular knife ಮಂಡಲಾಗ್ರ ಅಥವಾ ದುಂಡನ್ನ ಚಾಕೂ ಎಂದು ಅನ್ನುತ್ತಾರೆ. ಸುಶ್ರುತರು ಮಂಡಲಾಗ್ರವನ್ನು ಹಿಡಿಯುವ ಅಥವಾ ಗ್ರಹಣ ಮಾಡುವ ಸಂದರ್ಭದಲ್ಲಿ ಹೀಗೆ ಬರೆದಿದ್ದಾರೆ. "ಮಂಡಲಾಗ್ರಂ ಕಿಂಚಿದುತ್ತಾನೇನ ಪಾಣಿನಾ ಲೇಖನೇ ಬಹುಶೋಽವಚಾರ್ಯಂ" ಮಂಡಲಾಗ್ರವನ್ನು ಸ್ವಲ್ಪ ಎತ್ತಿದ ಕೈಯಿಂದ ಹಿಡಿದುಕೊಂಡು ಲೇಖನ ಕರ್ಮದಲ್ಲಿ ಬಹು ವಿಧವಾಗಿ ಪ್ರಯೋಗ ಮಾಡತಕ್ಕುದು. ಹೀಗೆ ಪ್ರಾಚೀನ ಮತ್ತು ಅರ್ವಾಚೀನ ಪ್ರಯೋಗದಲ್ಲಿ ಯಾವದೂ ಭೇಧವಿಲ್ಲ.

## ೨. ಕರಪತ್ರ

Amputation saw * ಕರವತ್ ಪತ್ರಂಯಸ್ಯ ತತ್ ಕರಪತ್ರಂ ತಥಾ ಕರೋಽಂಗುಲಿಭಿರಾಚಿತೋ ಭವತಿ, ತದ್ವತ್ ಯತ್ ಕಂಟೈರಾಚಿತಂ ಸ್ಯಾತ್ತತ್ ಕರಪತ್ರಮುಚ್ಯತೇ" (ಡಲ್ಹಣಃ) ಹೇಗೆ ಕೈಯ ಮೇಲೆ ಬೆರಳುಗಳು ಹತ್ತಿರುತ್ತಿವೆಯೋ, ಅದೇ ರೀತಿಯಾಗಿ ಮೇಲೆ ಮುಳ್ಳು ಹತ್ತಿಕೊಂಡಿರುತ್ತವೆ. ಆದುದರಿಂದಲೇ ಇದಕ್ಕೆ ಕರಪತ್ರವೆಂದನ್ನುತ್ತಾರೆ. ಕರಪತ್ರ (ಕರಗಸ) ಕ್ಕೆ ಅಂಗ್ರೇಜಿಯಲ್ಲಿ (Saw) ಸಾ ಎನ್ನುತ್ತಾರೆ. ಇದು ಅಸ್ಥಿಚ್ಛೇದನ (Bone-cutting) ಕಾರ್ಯದಲ್ಲಿ ಬರುತ್ತದೆ. ಕರಪತ್ರಗಳು ಸಂಣವು ದೊಡ್ಡವು. ಎಂದು ಎಷ್ಟೋಪ್ರಕಾರದವಿರುತ್ತವೆ. ಊರು, (ತೊಡೆ) ಜಂಘಾ (ಮೊಳಕಾಲು) ಗಳ ಅಸ್ಥಿ ಮೊದಲಾದವುಗಳ ದೆಶೆಯಿಂದ ದೊಡ್ಡವೂ ಮತ್ತು ಬೆರಳುಗಳ ದೆಶೆಯಿಂದ ಸಂಣಕರಪತ್ರ ( Finger saw- ಬೆರಳು ಪತ್ರ ) ಗಳೂ ಕೆಲಸಕ್ಕೆ

ಬರುತ್ತವೆ. ಅಸ್ಥಿಯನ್ನು ಕತ್ತರಿಸುವ ಮೊದಲು ತ್ವಚೆ, ಮಾಂಸ, ಪೇಶೀ, ಇತ್ಯಾದಿ ರಚನೆಗಳನ್ನು ಸರಿಸಿ ಅಸ್ಥಿಯನ್ನೊಂದನ್ನೇ ಮಾಡಿಕೊಳ್ಳತಕ್ಕದು. ಮಾಂಸಪೇಶಿಗಳನ್ನು ಸರ್ಪಫಣಿಯಂತ್ರದಿಂದ ಸರಿಸಿ ಬೇರೆ ಇಡತಕ್ಕದು. ಅಸ್ಥಿಯಮೇಲೆ ಮೊದಲು ಕರಪತ್ರದಿಂದ ಒಂದು ಆಳವಾದ ಗುರುತು (Groove) ಮಾಡಿಕೊಳ್ಳತಕ್ಕದು. ನಂತರ ಅದನ್ನು ಹಿಂದೆ ಮುಂದೆ ಮಾಡಿ ಕತ್ತರಿಸತಕ್ಕದು. ಗುರುತನ್ನು ಮಾಡಿಕೊಳ್ಳದಿದ್ದರೆ ಕರಪತ್ರವು ಜಾರಿಕೊಂಡು (Slipping) ಅನ್ಯ ಅವಯುವಗಳನ್ನು ಅಥವಾ ವೈದ್ಯನ ಅಥವಾ ಅವನ ಸಹಾಯಕನ ಯಾವದೇ ಅಂಗವನ್ನು ಕತ್ತರಿಸಬಹುದು.

ಕೆಳಗೆ ಬರೆದ ನಿಯಮುಗಳನ್ನು ನೆನಪಿನಲ್ಲಿಡಿರಿ.

"First make a groove on the bone by drawing the saw firmly twice or thrice towards yourself and then begin to saw with to and fro move—ments. If one does not make a groove as above, the saw often slips and is likely to injure the surrounding structure's and sometimes even the

---

§ "ವೃದ್ಧಿಪತ್ರಂ ಕ್ಷುರಾಕಾರಂ ಛೇದ ಭೇದನ ಪಾಟನೇ। ಋಜ್ವಗ್ರ ಮುನ್ನತೇ ಶೋಫೇ ಗಂಭೀರೇ ಚ ತದನ್ಯಥಾ ||೭|| ನತಾಗ್ರಂ ಪೃಷ್ಠತೋ ದೀರ್ಘಂ ಹ್ರಸ್ವವಕ್ತ್ರಂ ಯಥಾಽಶ್ರಯಂ। [ ಅ. ಹೃ. ಸೂ. ಅ. ೨೬ ] ವೃದ್ಧಿ ಪತ್ರವು ಕ್ಷುರಾಕಾರ [Razor-like] ವಾಗಿರುತ್ತದೆ. ಛೇದನ ಭೇದನ ಮತ್ತು ಪಾಟನ ಕ್ರಿಯೆಗಳಲ್ಲಿ ಉಪಯೋಗಿಯಾಗಿರುತ್ತದೆ. ಇದರ ಅಗ್ರಭಾಗವು ಋಜು [ಸರಳ-Straight] ಇರುತ್ತದೆ. ಮತ್ತು ಉನ್ನತ [ಎತ್ತರವಾಗಿದ್ದು] ಶೋಥ ವ್ರಣಾದಿಗಳಲ್ಲಿ ಕೆಲಸಕ್ಕೆ ಬರುತ್ತದೆ. ಗಂಭೀರ ಶೋಥ [ಯಾವದು ಹೊರಗೆ ತ್ವಚೆಯ ಸಮಾನವಾಗಿಯೂ ಒಳಗೆಗಂಭೀರ [ಆಳವಾದದ್ದೂ. Deep abscess ] ದಲ್ಲಿ ನತಾಗ್ರ [Curved knife ] ಮತ್ತು ಹಿಂದುಗಡೆಗೆ ಉದ್ದ ಮತ್ತು ಸಂಣ ತುದಿಯುಳ್ಳದ್ದೂ ಇರುತ್ತದೋ, ಅಂಥ ವ್ರಣಗಳಲ್ಲಿ ಕೆಲಸಕ್ಕೆ ಬರುತ್ತವೆ. ಇದಕ್ಕೆ ಸ್ಕೆಲ್ಪೆಲ [Scalpel] ಎಂದೂ ಅನ್ನುತ್ತಾರೆ.

fingers of the surgeon and his assistant" A guide to surgical Instruments.

## ೩ ವೃದ್ಧಿಪತ್ರ

(Razor, Knife or scalpel) "ವೃದ್ಧೇಃ ಪತ್ರಮಿವ ವೃದ್ಧಿಪತ್ರಂ ತಚ್ಚ ದ್ವಿವಿಧಂ, ಏಕಮಂಚಿತಾಗ್ರಂ, ದ್ವಿತೀಯಂ ಪ್ರಯತಾಗ್ರಂ, ದ್ವೇಽಪಿ ಸಪ್ತಾಂಗುಲ ಪ್ರಮಾಣೇ। ದ್ವಯೋರಪಿ 'ಅರ್ಧಪಂಚಾಂಗುಲಂ ವೃಂತಂ ಕಾರ್ಯಂ ಸಾರ್ಧಾಂಗುಲ ಫಲಮಿತಿ' ಅನಯೋರ್ಮಧ್ಯೇ ಅಂಚಿತಾಗ್ರವೃದ್ಧಿ ಪತ್ರಂ ಕ್ಷುರಮಾಹುಃ" (ಡಲ್ಹಣಃ) ಅರ್ಥ— ಅಷ್ಟವರ್ಗಾಂತರ್ಗತ 'ವೃದ್ಧಿ' ನಾಮಕ ವನಸ್ಪತಿಯ ಪತ್ರ (ಎಲೆ) ಗಳ ಸಮಾನವಾಗಿ ಯಾವದರ ಫಲಕೆಯು (Blade) (ಅಗ್ರವು- ತುದಿ) ಇರುತ್ತದೆಯೋ ಅದಕ್ಕೆ ವೃದ್ಧಿಪತ್ರವೆನ್ನುತ್ತಾರೆ. ಇದು ಎರಡು ಪ್ರಕಾರದ್ದಿರುತ್ತದೆ. ೧) ಅಂಚಿತಾಗ್ರ- ಇದರ ಹಿಂದಿನ ಸಿರೋಭಾಗವು ಅಥವಾ ತುದಿಯು ಒಳಗಿನಿಂದ ಮಡಿಚಿ ಕೊಂಡಿದ್ದು. ೨) ಪ್ರಯತಾಗ್ರ- ಇದರ ತುದಿಯು ಅಗಲವಾಗಿ ಅಥವಾ ಆಯತವಾಗಿರುವದು. ಎರಡೂ ಏಳು ಅಂಗುಲ ಉದ್ದವಿರುತ್ತವೆ. ಎರಡೂಗಳ ವೃಂತವು ಮುಷ್ಟಿ ೫೩ ಅಂಗುಲ ಮತ್ತು ಫಲ (ತುದಿಯು) ೧೩ ಅಂಗುವಾಗಿರುತ್ತದೆ. ಇವುಗಳಲ್ಲಿ ಅಂಚಿತಾಗ್ರ ವೃದ್ಧಿ ಪತ್ರವನ್ನು ಕ್ಷುರ (Razor- ಉಸ್ತರಾನಾಪಿತರ ಕತ್ತಿ) ಎನ್ನುತ್ತಾರೆ. ವಾಗ್ಭಟಾನು ಸಾರವಾಗಿ * ಪ್ರಯತಾಗ್ರ ವೃದ್ಧಿಪತ್ರವು ಕ್ಷುರವೇ ಇದೆ ಎಂದು ಸರಿಯಾಗಿ ಪ್ರತೀತವಾಗುತ್ತದೆ. ಕ್ಷುರವು ಅಗಲವಾದರೂ ಎರಡು ಅಂಗುಲವಿರುತ್ತದೆ.

ವೃದ್ಧಿ ಪತ್ರಕ್ಕೆ ಈಗ (Double Bistoury) ಡಬಲ್ ಬಿಸ್ಟುರೀ ಎಂದೂ (Dissecting Scalpel) ಶವಚ್ಛೇದಕ ವೃದ್ಧಿಪತ್ರ ಎಂದೂ ಎನ್ನುತ್ತಾರೆ. ವೃದ್ಧಿಪತ್ರದ ಅರ್ಥವು ವೃದ್ಧ ಅಥವಾ ದೀರ್ಘ (ಆಯತ) ಮುಖ (ತುದಿ) ಯುಳ್ಳ "ಚಾಕು" ಎನಂತೆ ಆಗುತ್ತದೆ. ನಾಪಿತರು (ನಾವಲಿಗರು) ಪ್ರಾಯಃ ಕ್ಷುರದಿಂದಲೇ ವ್ರಣ ಛೇದನೆ (Incision) ಯನ್ನು ಮಾಡುತ್ತಾರೆ.

ವೃದ್ಧಿಪತ್ರದ ಸಂಬಂಧದಲ್ಲಿ ಕೆಳಗೆ ಬರೆದ ವಚನಗಳನ್ನು ನೆನಪಿನಲ್ಲಿಡಿ —

KNIVES:— Of two types. (i) Scalpels- have short broad blades with sharppoints, used to make incisions through the soft tissues. (ii) Bistouries have long blades; blades are narrow in proportion to their length; may be straight or curved; sharp or probe pointed. They are used to open sinuses or fistulae and in performing small amputations, such as of fingers and toes— A Guide to S. I.

## ೪ ನಖಶಸ್ತ್ರ (Nail-Parer)

"ನಖಾನಾಂ ಛೇದನಾಯ ಶಸ್ತ್ರಂ ನಖಶಸ್ತ್ರಂ, ತಸ್ಯಫಲಂ ದ್ವ್ಯಂಗುಲಾಯಾಮಂ, ಏಕಾಂಗುಲ ವಿಸ್ತೃತಮ್" (ಡಲ್ಹಣಃ) ನಖಗಳನ್ನು ಕತ್ತರಿಸಲಿಕ್ಕೆ ಯಾವ ಶಸ್ತ್ರವು ವ್ಯವಹೃತವಾಗಿದೆಯೋ ಅದಕ್ಕೆ ನಖಶಸ್ತ್ರ † ಎನ್ನುತ್ತಾರೆ. ಅದರ ಫಲ (ತುದಿ) ೨ ಅಂಗುಲ ಉದ್ದ ಮತ್ತು ೧ ಅಂಗುಲ ಅಗಲವಾಗಿದೆ. ಈ ಪ್ರಮಾಣವು ಸರಿಯಾದದ್ದು ಇಲ್ಲವೆಂದು ತೋರುತ್ತದೆ ಸುಶ್ರುತರು ೮ ಅಂಗುಲ ಉದ್ದವೆಂದು ಬರೆದಿದ್ದಾರೆ. "ತತ್ರ ನಖಶಸ್ತ್ರೈಷಣ್ಯೌ ಅಷ್ಟಾಂಗುಲೆ"। ಅಗಲವು ಬಹುಶಃ ಅರ್ಧಾಂಗುಲವಾಗಿರುತ್ತದೆ. ನಾವಲಿಗರು ಇದರಿಂದ ಶಿರಾವೇಧದ ಕಾರ್ಯವನ್ನೂ ಮಾಡುತ್ತಾರೆ. ನಖಶಸ್ತ್ರದ ಎರಡನೇ ಶಿರೋ ಭಾಗವನ್ನು ಅಗಲ ಮಾಡಿಸಿ ಶಲಾಕಾ ಅಥವಾ ತಾಲಯಂತ್ರದಂತೆ ಕರ್ಣಶೋಧನಾರ್ಥವಾಗಿ ಅದನ್ನು ಪ್ರಯೋಗ ಮಾಡುತ್ತಾರೆ.

---

† "ವಕ್ರರ್ಜುಧಾರಂ ದ್ವಿಮುಖಂ ನಖಶಸ್ತ್ರಂ ನವಾಂಗುಲಮ್।
ಸೂಕ್ಷ್ಮಶಲ್ಯೋದ್ಧೃತಿಚ್ಛೇದ - ಭೇದ – ಪ್ರಚ್ಛನ್ನ – ಲೇಖನೇ ॥೨೦॥

(೫) ಮುದ್ರಿಕಾ ಶಸ್ತ್ರ (Ring knife) ಮುದ್ರಿಕೆಯಲ್ಲಿ (ಉಂಗುರದಲ್ಲಿ) ಸಂಲಗ್ನ (ಹತ್ತಿಕೊಂಡಿದ್ದರಿಂದ) ವಾಗಿದ್ದರಿಂದ ಇದಕ್ಕೆ ಮುದ್ರಿಕಾ ಶಸ್ತ್ರವೆಂದೆನ್ನಲಾಗಿದೆ.

ಭಾಲುಕೀ ತಂತ್ರದಲ್ಲಿ ಇದರ ಲಕ್ಷಣವನ್ನು ಹೀಗೆ ಬರೆದಿದ್ದಾರೆ. "ಮುದ್ರಿಕಾಯಾಂ ನಿಬದ್ಧಂಸ್ಯಾದ್ ವೃದ್ಧಪತ್ರಂಸಲಕ್ಷಣಮ್| ದ್ವ್ಯಂಗುಲಂ ಮುದ್ರಿಕಾ ಶಸ್ತ್ರಂಕ್ಷುರ ಸಂಸ್ಥಾನಮೇವಚ"|| ಸುಶ್ರುತರು ಇದರ ಕಾರ್ಯವನ್ನು ಛೇದನ- ಭೇದನ ಎಂದು ಬರೆದಿದ್ದಾರೆ. ವಾಗ್ಭಟರು ಇದರ ಸಾರಾಂಶವನ್ನು ಹೆಚ್ಚು ಸ್ಪಷ್ಟಪಡಿಸಿದ್ದಾರೆ. † ಗಂಭೀರ ಸ್ಥಾನಗಳಲ್ಲಿ ಎಲ್ಲಿ ಕೈಯು ತಟ್ಟುವದಿಲ್ಲವೋ, ಕೇವಲ ಬೆರಳು ಮಾತ್ರ ತಟ್ಟುವದೋ ಅಲ್ಲಿ ಮುದ್ರಿಕಾ ಶಸ್ತ್ರದಿಂದ ಕಾರ್ಯ ಮಾಡಲಾಗುತ್ತಿದೆ. ಶತ್ರುಗಳನ್ನು ಕೊಲ್ಲಲಿಕ್ಕೆ ಇದು ಗುಪ್ತ|ಶಸ್ತ್ರದ ಕೆಲಸವನ್ನು ಮಾಡಬಲ್ಲದು.

---

(ಅ. ಹೃ. ಸೂ. ಅ. ೨೬) ನಖಚ್ಛೇದಕವು ವಕ್ರ ಮತ್ತು ಋಜುವಾದ ಧಾರೆಯುಳ್ಳದ್ದು ಮತ್ತು ದ್ವಿಮುಖೀ, ೯ ಅಂಗುಲ ಉದ್ದವಾಗಿರುತ್ತದೆ. ಛೇದನ, ಭೇದನ, ಒರೆಸುವ ಮತ್ತು ಲೇಖನ ಕಾರ್ಯದಲ್ಲಿ ಉಪಯೋಗ ಬೀಳುತ್ತದೆ. ದ್ವಿ ಮುಖವೆಂದರೆ ಒಂದು ತುದಿಯು ವಕ್ರ ಮತ್ತೊಂದು ತುದಿಯು ಋಜು ಧಾರೆಯುಳ್ಳದ್ದು ಇರಬಹುದು. ಗ್ರಹಣವು (ಹಿಡಿಯುವದು) ಮಧ್ಯದಲ್ಲಿ ಮಾಡಬಹುದು. ಅಥವಾ ಎರಡೂ ತುದಿಗಳು ಕೂಡಿಕೊಂಡೇ ಇರಬೇಕು ಒಂದು ಋಜುವಾದದ್ದು ಮತ್ತೊಂದು ವಕ್ರವಾದದ್ದು

(†) " ಕುರ್ಯಾದಂಗುಲಿಶಸ್ತ್ರಕಂ ||೧೪|| ಮುದ್ರಿಕಾನಿರ್ಗತ ಮುಖಂ ಫಲೇತ್ವರ್ಧಾಂಗುಲಾಯತಮ್| ಯೋಗತೋ ವೃದ್ಧಿಪತ್ರೇಣ ಮಂಡಲಾಗ್ರೇಣ ವಾಸಮುಮ್ ||೧೫|| ತತ್ ಪ್ರದೇಶಿನ್ಯಗ್ರ ಪರ್ವ ಪ್ರಮಾಣಾರ್ಪಣ ಮುದ್ರಿಕಂ | ಸೂತ್ರ ಬದ್ಧಂಗಲ ಸ್ರೋತೋರೋಗಚ್ಛೇದನ ಭೇದನೇ ||೧೬" (ಅ. ಹೃ- ಸೂ. ಅ ೨೬) ಯಾವುದರ ಮುಖವು ಮುದ್ರಿಕೆ (Finger-ring) ಯಿಂದ ಹೊರಟಿದೆಯೋ ಅದರ ಫಲ (ತುದಿಯು) ವು (Blade) ಅರ್ಧಾಂಗುಲವಿರುತ್ತಿದೆ. ವೃದ್ಧಿ ಪತ್ರ ಅಥವಾ ಮಂಡಲಾಗ್ರದ ಸಮಾನವಾಗಿರತಕ್ಕದು. ಪ್ರದೇಶಿನೀ (ಉಂಗುರ ಬೆರಳು) ಬೆರಳಿನ (Index finger) ಅಗ್ರ ಪರ್ವದ ಸಮಾನವಾಗಿ ಮುದ್ರಿಕೆಯು ಇರತಕ್ಕದು.

## ೬ ಉತ್ಪಲ ಪತ್ರಕ (Lancet)

ಉತ್ಪಲವೆಂದು ಕಮಲದ ಹೂವುಗಳಿಗೆ ಎನ್ನುತ್ತಾರೆ. ಅದರ ಒಂದು ದಳ ಪತ್ರವು (Petal) ಸಮಾನಾಕಾರ ಉಳ್ಳ ಶಸ್ತ್ರಕ್ಕೆ ಉತ್ಪಲಪತ್ರವೆನ್ನುತ್ತಾರೆ. ಇದು ಚೂಪುಳ್ಳ (Sharp pointed) ಚಾಕುವಿನಂತಿದೆ. ಇದಕ್ಕೆ ಅಂಗ್ರೇಜಿಯಲ್ಲಿ Lancet ಲೆನ್ಸೆಟ ಎನ್ನುತ್ತಾರೆ. ಕಾರ್ಯವು ಸುಶ್ರುತರಂತೆ ಛೇದನ, ಭೇದನವೆಂದು ತಿಳಿಯಿರಿ. ಇದರಂತೆ ಈಗ Vaccination lancet (ವೈಲೀ ತೆಗೆಯುವ ಚಾಕೂ) ಮತ್ತು Abscess lancet (ವಿದ್ರಧಿ ಮತ್ತು ವ್ರಣಶೋಥೋಪಯೋಗೀ ಚಾಕೂ) ಗಳೂ ಆಗುತ್ತವೆ. *

## ೭ ಅರ್ಧಧಾರ ( Helf-edged knife )

"ಅಧಾರಾಯಃಸ್ಯ ತತ್ ಅರ್ಧಧಾರಂ, ಚಕ್ರಧಾರ ಇತಿ ಪ್ರಸಿದ್ಧಮ್। ತಚ್ಚಾಷ್ಟಾಂಗುಲಾಯತಂ, ಉರಸಿ ಅಂಗುಲ ವಿಸ್ತಾರಂ, ದ್ವ್ಯಂಗುಲ

---

ಅದು ಸೂತ್ರದಿಂದ ಮಣಿಬಂಧದಲ್ಲಿ ಕಟ್ಟಿರಬೇಕು. ಇದು ಕೊರಳು ಅಥವಾ ಇನ್ನು ಬೇರೆ ಸ್ರೋತಸ್ಸುಗಳ ರೋಗಗಳಲ್ಲಿ ಕೆಲಸಕ್ಕೆ ಬರುತ್ತದೆ. ವಾಗ್ಭಟರು ಮುದ್ರಿಕಾ ಶಸ್ತ್ರ ಅಂಗುಲಿ ಶಸ್ತ್ರ ಎಂದಿದ್ದಾರೆ. ಅದನ್ನು ಸೂತ್ರದಿಂದ ಕಟ್ಟುವದು ಅವಶ್ಯಕವಾಗಿದೆ. ಒಮ್ಮೊಮ್ಮೆ ಮುದ್ರಿಕೆಯು ಸಡಿಲವಾಗಿ ಕೊರಳಲ್ಲಿ ಬಿದ್ದರೆ ಭಯಾನಕ ಪರಿಣಾಮವಾಗುತ್ತದೆ. ಇದರ ವ್ಯವಹಾರವು ಕೊರಳು ಮತ್ತು ಮೂಢ ಗರ್ಭದಲ್ಲಿ ಆಗುತ್ತದೆ. ಅಂಗುಲಿ ಶಸ್ತ್ರದ ಒಂದು ರೂಪಾಂತರವು ಹೀಗೂ ಆಗುತ್ತದೆ. ವೃದ್ಧಿಪತ್ರವು ಬೆರಳಿನ ಸಂಗಡ ಸೀದಾ ಅಥವಾ ಸಮಾನಾಂತರ (Parallel) ಇರತಕ್ಕುದು.

(*) ವಾಗ್ಭಟರು ಇದಕ್ಕೆ 'ಅಧ್ಯರ್ಧಧಾರವತ್' ಎಂದಿದ್ದಾರೆ. ಮತ್ತು ಉತ್ಪಲಪತ್ರ ಹಾಗೂ ಅಧ್ಯರ್ಧಧಾರೆಯನ್ನು ಏಕತ್ರ (ಒಂದೇ ಕಡೆಗೆ) ವರ್ಣನೆ ಮಾಡಿದ್ದಾರೆ. ಹೀಗೆ- "ಉತ್ಪಲಾಧ್ಯರ್ಧಧಾರಾಖ್ಯೆ ಛೇದನೇ ಭೇದನೇ ತಥಾ'' (ಅ. ಹೃ. ಸೂ. ಅ. ೨೬) ಇದರ ಮೇಲೆ

ಫಲವಮ್, ಅನ್ಯೇತು ಅಧ್ಯರ್ಧಧಾರಮಿತಿ ಪಠಂತಿ, ಅಧಿಕಮರ್ಧೇ ಧಾರಾ ಯಸ್ಯ ತತ್ ಅಧ್ಯರ್ಧ ಧಾರವಮ್" (ಡಲ್ಹಣಃ) ಅರ್ಧಧಾರ ಶಸ್ತ್ರದ ಅರ್ಥವು ಇಂತಿದೆ— ಅರ್ಧಧಾರೆಯುಳ್ಳದ್ದು, ಅರ್ಥಾತ್ ಯಾವದರ ಕೇವಲ ಅರ್ಧ ಭಾಗದ ಧಾರೆಯು ತೀಕ್ಷ್ಣವಾಗಿಯೂ, ಶೇಷ ಅರ್ಧಭಾಗವು ಸ್ಥೂಲವಾಗಿ ರುತ್ತದೆ. ಇದರ ಕಾರ್ಯವೂ ಛೇದನ ಭೇದನವಾಗಿದೆ.

## ೮. ಸೂಚೀ ( Suture needle )

ಸೂಚೀ ಎಂದು ಸೂಜಿಗೆ (Needle) ಎನ್ನುತ್ತಾರೆ. ಇದರಿಂದ ವ್ರಣಗಳ ತುದಿಯನ್ನು ಕೂಡಿಸಿಕೊಂಡು ಹೊಲಿಯಲಾಗುತ್ತದೆ. ಬಹು ತರವಾಗಿ ೩ ಪ್ರಕಾರಗಳಿರುತ್ತವೆ ೧) ಧನುರ್ವಕ್ರ (Curved like a bow) ೨) ಸರಲ ಅಥವಾ ಋಜು (Straight ) ೩) ಅರ್ಧವಕ್ರ (Half curved) ಇದರ ಒಂದು ಸಿರೋಭಾಗವು ಅತಿ ಸೂಕ್ಷ್ಮ, ತೀಕ್ಷ್ಣ ಮತ್ತು ಎರಡನೇದು ಪಾಶಯುಕ್ತವಾಗಿರುತ್ತದೆ. ಮಧ್ಯಭಾಗವು ಗೋಲಾ ಕಾರ ಮತ್ತು ತ್ರಿಧಾರಾ, ಮುಂದೆ ತೆಳ್ಳಗಾಗಿಯೂ, ಹಿಂದೆ ಸಾವಕಾಶ ವಾಗಿ ದೊಡ್ಡ (ದಪ್ಪ) ದಾಗಿರುತ್ತದೆ. ಯಾಕಂದರೆ– ತ್ವಚೆ, ಮಾಂಸ ಇತ್ಯಾದಿಗಳಲ್ಲಿ ಪ್ರವೇಶವಾಗುವ ಮೊದಲು ಅಲ್ಪವೇಧಮಾಡತಕ್ಕುದು. ಪುನಃ ಹೆಚ್ಚು ಇದರಲ್ಲಿ ಸೂಜಿಯು ಸುಗಮತೆಯಿಂದ ಪ್ರವೇಶವಾಗುವದು. ಇದರ ಸಂಬಂಧದಲ್ಲಿ ಸು. ಸೂ ಅ. ೨೫ ರ ಕೆಳಗೆ ಬರೆದ ವಚನವನ್ನು ನೋಡಿರಿ— "ತತೋವ್ರಣಂ ಸಮುನ್ನಮ್ಯಸ್ಥಾಪಯಿತ್ವಾ ಯಥಾಸ್ಥಿತಃ। ಸೀವ್ಯೇತ್ ಸೂಕ್ಷ್ಮೇಣ ಸೂತ್ರೇಣ ವಲ್ಕೇನಾಶ್ಮಂತ ಕಸ್ಯವಾ ॥೨೦॥ ಶಣಜ ಕ್ಷೌಮಸೂತ್ರಾಭ್ಯಾಂ ಸ್ನಾಯ್ವಾ ಬಾಲೇನವಾ ಪುನಃ..............। ದೇಶೇಽಲ್ಪ ಮಾಂಸೆ ಸಂಧೌ ಚ ಸೂಚೀ ವೃತ್ತಾಂಗುಲ ದ್ವಯಮ್।

---

ಅರುಣದತ್ತನ ಟೀಕೆಯನ್ನು ನೋಡಿರಿ– "ಉತ್ಪಲಪತ್ರಂ ದೀರ್ಘಮುಖ ಮಧ್ಯರ್ಧಧಾರಂ ತುಹ್ರಸ್ವವಕ್ತ್ರಮಿತ್ಯರ್ಥಃ।" ಉತ್ಪಲಪತ್ರವು ದೀರ್ಘ ಮುಖ ವುಳ್ಳದ್ದು (Long pointed) ಮತ್ತು ಅರ್ಧ ಧಾರವು ( Short pointed) ಇರುತ್ತದೆ.

ಆಯತಾ ತ್ರ್ಯಂಗುಲಾ ತ್ರ್ಯಸ್ರಾ ಮಾಂಸಲೇಷ್ವಪಿ ಪೂಜಿತಾ। ಧನುರ್ವಕ್ರಾ ಹಿತಾ ಮರ್ಮಫಲಕೋಶೋದರೋಪರಿ। ಇತ್ಯೇತಾಸ್ತ್ರಿವಿಧಾಃ ಸೂಚೀಸ್ತೀಕ್ಷ್ಣಾಗ್ರಾಃ ಸುಸಮಾಹಿತಾಃ ॥೨೪॥ ಕಾರಯೇನ್ಮಾಲತೀ ಪುಷ್ಪವೃಂತಾಗ್ರ ಪರಿಮಂಡಲಾಃ। ನಾತಿದೂರೇ ನಿಕೃಷ್ಟೇ ವಾ ಸೂಚೀಂಕರ್ಮಣಿ ಪಾತಯೇತ್ ॥ ೨೫ ॥ ದೂರಾದ್ರುಜೋ ವ್ರಣೌಷ್ಠಸ್ಯ ಸನ್ನಿಕೃಷ್ಟೇಽವಲುಂಚನಮ್ ॥೨೬॥ (ಅರ್ಥವು ಸುಗಮವಿದೆ.) ಆಯತಾ, ತ್ರ್ಯಸ್ರಾ, ಧನುರ್ವಕ್ರಾದಿ ಶಬ್ದಗಳ ಮೇಲೆ ಲಕ್ಷ್ಯಕೊಡಿರಿ. ಈಗ ಪಾಶ್ಚಿಮಾತ್ಯರ ಮತವನ್ನು ಕೆಳಗೆ ಕೊಡಲಾಗಿದೆ.

Suture needles— Also known as skin Needles have a bayonet-shaped, tapering point. They are triangular (ತ್ರ್ಯಸ್ರಾ) on section. As the needle, it cuts through the skin more and more, thus facilitating the introduction of a thicker thread necessary to hold the skin edges in position. They may be of various sizes, straight or curved Straight ones are preferable, when suturing structures on the surface, such as, the skin. Curved ones are convenient for suturing in a deep cavity — A Guide to Surgical Instruments.

† ಸೂಜಿಗಳು:— ಕತ್ತಿಯಂಥ ಆಯುಧ "ಸಂಗೀನ"ದ ಸಮಾನವಾದ ತೀಕ್ಷ್ಣಾಗ್ರ ಮತ್ತು ತ್ರಿಕೋಣಾಕೃತಿಯುಳ್ಳವೂ ಇರುತ್ತವೆ. ಸೂಜಿಯು ತ್ವಚೆಯಲ್ಲಿಂದ ಪ್ರವೇಶವಾದಂತೆ ಹೆಚ್ಚಾಗಿ ತ್ವಚೆಯನ್ನು ಕತ್ತರಿಸುತ್ತದೆ. ಯಾಕೆಂದರೆ ದಪ್ಪವಾದ ಧಾರವು ಸುಗಮತೆಯಿಂದ ತ್ವಚೆಗಳ ತುದಿಯೊಳಗಿಂದ ಹಾಯ್ದು ಹೋಗಬೇಕೆಂದು (ಕತ್ತರಿಸುತ್ತದೆ) ಸರಳವಾದ ಸೂಜಿಗಳು ತ್ವಗ್ಗತ ವ್ರಣಗಳನ್ನು ಹೊಲಿಯಲಿಕ್ಕೂ ಮತ್ತು ವಕ್ರವಾದ ಸೂಜಿಗಳು ಗಂಭೀರವಾದ ಸ್ಥಾನಗಳ ದೆಶೆಯಿಂದಲೂ ಇವೆ.

ಈಗ ಒಂದು ಸೂಜೀಗ್ರಾಹಕ (Needle-holder) ದ ಪ್ರಯೋಗವು ಸೂಜಿಯನ್ನು ಹಿಡಿಯಲಿಕ್ಕಾಗಿ ಇರುತ್ತದೆ. ಇದು ವಿಶೇಷತಃ ಗಂಭೀರ ಸ್ಥಾನ (ಬಸ್ತಿಗುಹಾದಿ) ಗಳಲ್ಲಿ ಕೆಲಸಕ್ಕೆ ಬರುತ್ತದೆ.

ಸುಶ್ರುತರವರ್ಣನೆಯು ಮೇಲೆ ವಿವರಿಸಿದಂತೆ ಅತ್ಯಂತ ಸಾರಗರ್ಭಿತವಾಗಿದೆ. ಈ ಹಿಂದೆ ಆಂತ್ರದ ವ್ಯಾಖ್ಯೆಯನ್ನು ಮಾಡುತ್ತ ಸೂತ್ರ ಅಥವಾ ಧಾರೆ (Threead or Suturing material) ಯ ವರ್ಣನೆಯನ್ನು ಮಾಡಲಾಗಿದೆ. ಅದನ್ನು ಪುನಃ ನೋಡಿಕೊಳ್ಳಿರಿ.

ಉಕ್ತಶ್ಲೋಕಗಳಲ್ಲಿ ಸುಶ್ರುತರು (ಸನ) ಶಣ (ಸಣಬು) ಕ್ಷೌಮ (Lin) ಬಾಲ (ಕೂದಲು) ಸ್ನಾಯು ಇತ್ಯಾದಿಗಳ ವರ್ಣನೆಯನ್ನು ಮಾಡಿದ್ದಾರೆ. ಸ್ನಾಯುವಿಗೆ ಆಂತ್ರವೆಂದು ತಿಳಿಯಬಾರದು. ಪ್ರತ್ಯುತ ಸೂಕ್ಷ್ಮ ಮಾಂಸ ತಂತು (Tendon) ಅಥವಾ ಕಂಡರಾಭೇದವೆಂದು ತಿಳಿಯತಕ್ಕದು. ಇದಕ್ಕೆ ತಂತು ಎಂದೂ ಸಹ ಎನ್ನಲುಬರುತ್ತದೆ.

## ೯ ಕುಶಪತ್ರ ( Paget's knife )

ದರ್ಭೆ (ಕುಶ) ಯ ಎಲೆ ಅಥವಾ ಗರಿಗಳ ಸದೃಶ ಚೂಪುಳ್ಳ ಮತ್ತು ಉದ್ದವಾದ ಫಲ (ತುದಿ) ಯಾವ ಶಸ್ತ್ರಕ್ಕೆ ಇರುತ್ತದೆಯೋ, ಅದಕ್ಕೆ ಕುಶ

---

† ಈಗ ವಾಗ್ಭಟೋಕ್ತ ಸೂಜೀ ಲಕ್ಷಣಗಳನ್ನು ನೋಡಿರಿ :— "ವೃತ್ತಾಗೂಢದೃಢಾ ಪಾಶೆ ತಿಸ್ರಃ ಸೂಚ್ಯೋऽತ್ರ ಸೀವನೇ। ಮಾಂಸಲಾನಾಂ ಪ್ರದೇಶಾನಾಂತ್ರ್ಯಸ್ರಾತ್ರ್ಯಂಗಲಮಾಯತಾ ॥೨೨॥ ಅಲ್ಪ ಮಾಂಸಾಸ್ಥಿ ಸಂಧಿಸ್ಥ ವ್ರಣಾನಾಂ ದ್ವ್ಯಂಗುಲಾಯತಾ॥ ವ್ರೀಹಿವಕ್ತ್ರಾ ಧನುರ್ವಕ್ರಾ ಪಕ್ವಾಮಾಶಯಮರ್ಮಸು ॥ ೨೩ ॥ ಸಾಸಾರ್ಧದ್ವ್ಯ ಯಾಂಗುಲಾ" ಅ. ಹೃ. ಸೂ. ಅ. ೨೬

ಅರ್ಥವು ಸುಗಮವಿದೆ. ಹೊಲಿಯುವ ಪ್ರಕಾರವನ್ನು ವಾಗ್ಭಟರು ಸೂ. ಅ. ೨೯ ರಲ್ಲಿ ಕೊಟ್ಟಿದ್ದಾರೆ. ಅದನ್ನೂ ನೋಡತಕ್ಕದಾಗಿದೆ. ಈ ರೀತಿಯಾಗಿ ವಾಗ್ಭಟರು ಕರ್ಣವೇಧನೀ ಸೂಚಿ (ಕಿವಿಯ ಸೂಜಿ) ಯ ವರ್ಣನೆಯನ್ನು ಮಾಡಿದ್ದಾರೆ. ಹೀಗೆ— "ಸೂಚೀ ತ್ರಿಭಾಗ ಸುಷಿರಾ ತ್ರ್ಯಂಗುಲಾ ಕರ್ಣವೇಧನೀ" ॥೨೮॥ ಅರ್ಥ ಸುಗಮ ಅ. ಹೃ.ಸೂ. ಅ. ೨೬

ಪತ್ರವೆನ್ನುತ್ತಾರೆ. ಇದರ ಆಕಾರವು ವರ್ತಮಾನದ Paget-knife ದಿಂದ ಕೂಡುತ್ತದೆ. ಕಾರ್ಯವು ವಿದ್ರಧಿ (abscess) ಇತ್ಯಾದಿಗಳ ವಿಸ್ರವಣ ಮಾಡುವದಿದೆ. ಕುಶಪತ್ರ ಸಂಬಂಧ ಡಲ್ಲಣನ ವ್ಯಾಖ್ಯೆಯು ಹೀಗಿದೆ_ "ಕುಶಪತ್ರ ತುಲ್ಯಂ ಕುಶಪತ್ರಂ, ತನ್ಮಾನಮಾಹ– ದ್ವ್ಯಂಗುಲಂ ರುಚಕ ವಿದ್ಯಾದಂಗುಲಂ ಫಲಮುಚ್ಯತೇ। ವೃಂತಂ ಸ್ಯಾತ್ ತ್ರ್ಯಂಗುಲಂ ಮಧ್ಯೆ ಕುಶಪತ್ರಸ್ಯ ಲಕ್ಷಣಂ" (ಡಲ್ಲಣಃ ಅರ್ಥ ಸುಗಮ)

## ೧೦. ಆಟೀಮುಖ

" ಆಟೀಜಲವರ್ಧನೀ ನಾಮ ಪಕ್ಷಿವಿಶೇಷಃ, ತನ್ಮುಖವನ್ಮುಖಂ ಯಸ್ಯ ತದ್ ಆಟೀಮುಖಂ, ತಥಾ ಚೋಕ್ತಂ,- 'ವೃಂತಂ ಸಪ್ತಾಂಗುಲಂ ವಿದ್ಯಾತ್ ತಸ್ಯಾಗ್ರೇ ಫಲಮಿಷ್ಯತೆ। ಆಟೀಮುಖ ಪ್ರಕಾರಂಹಿ ಫಲಮಂಗುಷ್ಠಮಾಯತಮ್" (ಡಲ್ಲಣಃ)— ಆಟೀ ಎಂಬುದು ಯಾವದೋ ಒಂದು ಜಲಚರ ಪಕ್ಷಿ ವಿಶೇಷವಾಗಿದೆ. ಅದರ ಚುಂಚಿನ ಆಕಾರದ ಸದೃಶವಾಗಿ ಈ ಶಸ್ತ್ರದ ಆಕಾರವೂ ಇದೆ. ಇದರ ಕಾರ್ಯವು ಸುಶ್ರುತರು 'ವಿಸ್ರಾವಣ' ಎಂದು ಬರೆದಿದ್ದಾರೆ. ಕೆಲವರು ಇದನ್ನು ಸಣ್ಣ ಕತ್ತರಿಯ ಸದೃಶವಾಗಿದೆ ಎಂದು ತಿಳಿದಿದ್ದಾರೆ. ಆದರೆ ಡಲ್ಲಣಾಚಾರ್ಯರಿಂದ ಉಕ್ತವಾದ ಆಕಾರದಿಂದ ಇದು ಕುಶಪತ್ರ ಇತ್ಯಾದಿಗಳಂತೆ ಇದೂ ಒಂದು ತರಹದ Lancet ಎಂದು ಪ್ರತೀತವಾಗುತ್ತದೆ.

## ೧೧. ಶರಾರೀಮುಖ ( Scissors )

ಇದರ ಪ್ರಸಿದ್ಧವಾದ ಹೆಸರು ಕತ್ತರಿ (ಕೈಂಚೀ–ಫಾರಸಿ) ಇರುತ್ತದೆ. ಶರಾರೀ ದೀರ್ಘ ಚಂಚುಃ ಪಕ್ಷಿ ವಿಶೇಷಃ, ಸದ್ವಿವಿಧಃ:- ಧವಲಸ್ಕಂಧಃ ರಕ್ತ

---

* ವಾಗ್ಭಟರದು ಸುಶ್ರುತರಿಂದ ಸ್ವಲ್ಪ ಮತಭೇದವಾಗಿದೆ. ಅವರು ಶರಾರೀಮುಖ ಮತ್ತು ಕರ್ತರೀ ಇವು ಬೇರೆ ಬೇರೆ ಎಂದು ತಿಳಿದಿದ್ದಾರೆ. ಹೇಗೆ — "ಸ್ರಾವ್ಯೇಶರಾರ್ಯಾಸ್ಯತ್ರಿಕುರ್ಚಕೆ ||೧೦|| ಅರ್ಥ— ಶರಾರಿ

ಶೀರ್ಷಶ್ಚ ಧವಲಸ್ಕಂಧಸ್ಯ ಶರಾರೀಃ ಇತಿ ಸಂಜ್ಞಾ, ತನ್ಮುಖವನ್ಮುಖಂ ಯಸ್ಯ ತಚ್ಛರಾರಿಮುಖಂ, ತಸ್ಯ ಶಸ್ತ್ರಶ್ಯ ಲೋಕೇ ಕರ್ತರೀತಿ ಸಂಜ್ಞಾ, ತಾಂಚ ದ್ವಾದಶಾಂಗುಲಾಂ ಚಲತ್ ಪಲಾಶಾಂ ಕುರ್ಯಾತ್" (ಡಲ್ಹಣಃ) ಇದು ಕತ್ತರಿಯ ಅತ್ಯಂತ ಸುಂದರ ವ್ಯಾಖ್ಯಾನವಿದೆ. ಚಲತ್ಪಲಾಶಾದ ಅರ್ಥವು ಚಲತ್ಪಕ್ಷಾ ಅರ್ಥಾತ್ ಯಾವುದರ ಪಕ್ಷವು (ರೆಕ್ಕೆಯು) ಫಲಕ Blades ಸಡಿಲು ವಿರುತ್ತವೋ (ಸ್ವಸ್ತಿಕಯಂತ್ರದಂತೆ) ಅದಕ್ಕೆ ಕತ್ತರಿ ಎನ್ನುತ್ತಾರೆ. ಈ ರೀತಿಯಾಗಿ ಸುಶ್ರುತರು * ವರ್ಣನೆ ಮಾಡುವಾಗ ಮುಂದೆ ಸಾಗಿ ಶರಾರಿ ಮುಖಕ್ಕೆ ಕರ್ತರೀ (ಕತ್ತರಿ) ಎಂದಿದ್ದಾರೆ. ಹೇಗೆ- "ದಶಾಂಗುಲಾ ಶರಾರಿ ಮುಖೀ ಯಾ ಸಾ ಕರ್ತರೀತಿ ಕಥ್ಯತೇ" ಪರಂತು ವರ್ಣನೆ ಮಾಡುವಾಗ ಈ ಶಸ್ತ್ರಗಳ ಕಾರ್ಯವು 'ವಿಸ್ರಾವಣಾರ್ಥ' ಎಂದು ಬರೆದಿದ್ದಾರೆ. ಆದರೆ ಕತ್ತರಿಯ ಕೆಲಸವು ಭೇದನವಾಗಿದೆ. ಕತ್ತರಿಯ ವಿಷಯದಲ್ಲಿ ನವೀನ ಮತವನ್ನು ನೋಡಿರಿ :—

"Scissors— of various types, long or medium sized, straight or curved, sharp or probe-pointed. When required, more, then one type should be kept ready on the operation table'' Aguide to S.I.

ಈಗ ಕತ್ತರಿಗಳುಸಂಣವು, ದೊಡ್ಡವು, ಸರಳ ಅಥವಾ ವಕ್ರವಾದವೂ, ಸೂಕ್ಷ್ಮ ಅಥವಾ ಮುಖಉಳ್ಳವೂ (Sharp-Pointed or blunt) ಹೀಗೆ ಅನೇಕ ಪ್ರಕಾರವಾಗಿ ಅನೇಕ ಕಾರ್ಯಾರ್ಥವಾಗಿ ವ್ಯವಹರಿಸಲ್ಪಡುತ್ತವೆ. ಹೇಗೆಂದರೆ— Bandage Scissors, Bone- cutting scissor (ಅಸ್ಥಿಭೇದನೆಯಲ್ಲಿ Circumcision scissors (ನಿರುದ್ಧ

---

ಮುಖ ಮತ್ತು ತ್ರಿಕೂರ್ಚಕ ಇವು ಸ್ರಾವಣಾರ್ಥವಾಗಿವೆ. ಮತ್ತು

"ಸ್ನಾಯುಸೂತ್ರಕಚಚ್ಛೇದೇ ಕರ್ತರೀ ಕರ್ತರೀನಿಭಾ ||೯||

ಅ. ಹೃ. ಸೂ. ಅ. ೨೬

ಕತ್ತರಿಯ ಕಾರ್ಯವು ಸ್ನಾಯು, ಸೂತ್ರ, ವಸ್ತ್ರ, ಕೂದಲು ಮೊದಲಾದವನ್ನು ಕತ್ತರಿಸುವದಿದೆ. ಪ್ರದರ್ಶಿತವಾದ ಶರಾರಿಮುಖಶಸ್ತ್ರವು ಸುಶ್ರುತೋಕ್ತವೆಂದು ತಿಳಿಯತಕ್ಕದು. ವಿಸ್ರವಣ ಮತ್ತು ಕತ್ತರಿಸುವ

ಪ್ರಕಶವಲ್ಲಿ) Ear-scissors (ಕರ್ಣವಲ್ಲಿ), Nail- scissors (ನಖ ಭೇದನವಲ್ಲಿ) Umbilital scissors (ನಾಭಿ ನಾಡೀ ಭೇದನದಲ್ಲಿ,) Uterine scissors (ಗರ್ಭಾಶಯಾರ್ಥವಾಗಿ) Uvula (ಕಾಕ, ಗರ್ಭಶುಂಡೀಭೇದನಾರ್ಥವಾಗಿ) ಇತ್ಯಾದಿ.

## ೧೨ ಅಂತರ್ಮುಖ

† "ಮಧ್ಯಮುಖಂ ತಲ್ಲಕ್ಷಣ ಮಾಹ ಅಷ್ಟಾಂಗುಲಂ ಪ್ರಮಾಣೇನ ಜಿಹ್ಮಧಾರೇಣ ಚಾಪ್ಲುತಂ। ಶಸ್ತ್ರಮಂತರ್ಮುಖಂ ನಾಮ ಚಂದ್ರಾರ್ಧ ಮಿವ ಚೋದ್ಗತಮ್" (ಡಲ್ಹಣಃ) ಇದು ಅರ್ಧಚಂದ್ರಾಕಾರವಾಗಿ (Semi-lunar) ಜಿಹ್ಮಾಧಾರ (ವಕ್ರಧಾರ- Curved) ಎಂಟು ಅಂಗುಲ ಉದ್ದ ಅಂತರ್ಮುಖ (ಒಳಗೆ ಬಗ್ಗಿಕೊಂಡಿದ್ದು) ಶಸ್ತ್ರವಿರುತ್ತದೆ. ಇದು ಈಗ Syme's Abscess knife (ಸಾಯೀಮ್ ಮಹಾಶಯನ ವೃದ್ಧಿಪತ್ರವು) ದ ಆಕಾರದಿಂದ ಕೂಡುತ್ತದೆ. ಮತ್ತು ಇದು ಗಂಭೀರ ವ್ರಣಗಳ ಭೇದನಾರ್ಥವಾಗಿ ಕೆಲಸಕ್ಕೆ ಬರುತ್ತದೆ.

Surgical Instruments of the Hindus ನಾಮಕ ಪುಸ್ತಕದಲ್ಲಿ ಲೇಖಕ ಮಹೋದಯನು ಇದನ್ನು ಕರ್ತರಿ (ಕತ್ತರಿ) ಯ ಸಮಾನವೆಂದು ಪ್ರದರ್ಶಿಸಿದ್ದಾನೆ.

---

ಎರಡೂ ಕಾರ್ಯಗಳನ್ನು ಮಾಡಬಲ್ಲದು. ಯಾಕಂದರೆ ಇದು ತೆಳ್ಳಗೆ ಚೂಪ ವಾಗಿದೆ. ಸಾಧಾರಣ Dressing Scissors (ಕತ್ತರಿ) ವ್ರಣವಾದ ಕ್ರಿಯೆಯಲ್ಲಿ ಸಾಮಾನ್ಯವಾಗಿ ಕೆಲಸಕ್ಕೆ ಬರುತ್ತವೆ. ವಾಗ್ಭಟರಿಂದ ಉಕ್ತ ಶರಾರ್ಯಾಸ್ಯ (ಶರಾರಿಯ ಮುಖದಂಥ) ಶಸ್ತ್ರವು ಕುಶಪತ್ರ ಶಸ್ತ್ರದ ಆಕಾರದಂಥ ಒಂದು Lancet (ಚಾಕೂ) ಎಂದು ತಿಳಿಯತಕ್ಕದು.

† "ತದ್ವದಂತರ್ಮುಖಂ ತಸ್ಯ ಫಲಮಧ್ಯರ್ಧ ಮಂಗಲಮ್॥ ಅರ್ಧ ಚಂದ್ರಾಽಽನನಂ ಚೈತತ್ತಥಾಽಧ್ಯರ್ಧಾಂಗುಲಂ ಫಲೆ॥ (ಅ. ಹೃ. ಸೂ. ಅ. ೨೬) ಈ ಲಕ್ಷಣವು ಡಲ್ಹಣೋಕ್ತ ಅಂತರ್ಮುಖ ಲಕ್ಷಣಗಳಿಗೆ ಕೂಡುತ್ತದೆ.

ಏತತ್ಸದೃಶ ( ಇದರಂತೆ ) ಇತ್ತೀಚೆಗೆ ಅಸ್ಥಿಛೇದಕ Bone-cutting Forceps ಎಂಬುವದಕ್ಕೆ ಕೂಡುತ್ತದೆ.

## ತ್ರಿಕೂರ್ಚಕ

ಕೂರ್ಚಕ್ಕೆ ದೇಶೀ ಭಾಷೆಯಲ್ಲಿ ಕುಂಚು (Brush ಬ್ರಶ್) ಎನ್ನುತ್ತಾರೆ. ಇದು ವಿಸ್ರವಣಾರ್ಥವಾಗಿ ಅಥವಾ ಒರೆಸುವ ಕೆಲಸಕ್ಕೆ ಬರುತ್ತದೆ. "ತ್ರಯಃ ಕೂರ್ಚಾಯಸ್ಯ ತತ್ ತ್ರಿಕೂರ್ಚಕಂ" (ಡಲ್ಹಣಃ)

ಯಾವನೋ ಒಬ್ಬ ಮಹಾಶಯನು ಇದಕ್ಕೆ Trocar ಎಂದಿದ್ದಾನೆ ಆದರೆ ಇದು ಸರಿಯಾದದ್ದಿರುವದಿಲ್ಲ. ಟ್ರೋಕಾರವು ವ್ರೀಹೀಮುಖ ಯಂತ್ರವಾಗಿದೆ.

---

* "ಸ್ರಾವ್ಯೆ.... ತ್ರಿಕೂರ್ಚಕೆ...." ವಾಗ್ಭಟರು ತ್ರಿಕೂರ್ಚಕವನ್ನು ಸ್ರಾವಣಾರ್ಥವಾಗಿ ಬರೆದಿದ್ದಾರೆ. ಅದರ ಹೊರತಾಗಿ ಅವರು ಕೂರ್ಚ ಮತ್ತು ಖಜ ಎಂಬುವದರ ವರ್ಣನೆಯನ್ನೂ ಪ್ರತ್ಯೇಕವಾಗಿ ಮಾಡಿದ್ದಾರೆ. "ಸರ್ವವೃತ್ತಾಸ್ತ್ವಾಶ್ಚತುರಂಗುಲಾಃ | ಕೂರ್ಚೋ ವೃತ್ತೈಕಪೀಠಸ್ಥಾಃ ಸಪ್ತಾಷ್ಟೌ ವಾ ಸುಬಂಧನಾಃ | ಸಯೋಜ್ಯೋ ನೀಲಿಕಾ ವ್ಯಂಗಕೇಶ ಶಾತನ ಕುಟ್ಟನೆ ||೨೪|| (ಅ. ಹೃ. ಸೂ. ಅ. ೨೬) ನಾಲ್ಕು ಅಂಗುಲ ಉದ್ದ ಮತ್ತು ಏಳು ಅಥವಾ ಎಂಟು ಗೋಲಾಕಾರದ ಸೂಜಿಗಳು ಗೋಲಾಕಾರದ ಒಂದೇ ಪೀಠ (ಹಿಡಿಕಿ) ದ ಮೇಲೆ ಚನ್ನಾಗಿ ಹತ್ತಿ (ನಟ್ಟು) ಕೊಂಡಿರುತ್ತವೆಯೋ ಅದಕ್ಕೆ ಕೂರ್ಚ ಅಥವಾ ಸೂಜೀಕೂರ್ಚ (ಅರುಣದತ್ತನ ಮತದಂತೆ) ಎಂದೆನ್ನುತ್ತಾರೆ. ಅದಕ್ಕೆ ಸುಶ್ರುತರು ತ್ರಿಕೂರ್ಚಕ ಎಂದಿದ್ದಾರೆ. ಒಂದು ವೇಳೆ ಇದರಲ್ಲಿ ೭ ಅಥವಾ ೮ ಸೂಜಿಗಳನ್ನು ಹಚ್ಚಿದರೆ ಇದು ವಾಗ್ಭಟೋಕ್ತ ಕೂರ್ಚ ಅಥವಾ ಕುರ್ಚ್ಚ ಎಂಬುದಾಗಬಹುದು. ಇದು ನೀಲಿಕಾ, ವ್ಯಂಗ, ಅರ್ಶ ಇತ್ಯಾದಿಗಳಲ್ಲಿ ರಕ್ತಸ್ರಾವಣಾರ್ಥವಾಗಿ ಪ್ರಯುಕ್ತವಾಗುತ್ತದೆ. ಖಜ ಎಂಬುದರ ಲಕ್ಷಣವು— "ಅರ್ಧಾಂಗುಲಮುಖೈರ್ವೃತ್ತೈರಷ್ಟಾಬಿಃ ಕಂಟಕೈಃ ಖಜಃ || ಪಾಣಿಭ್ಯಾಂ ಮಥ್ಯಮಾನೇನ ಘ್ರಾಣಾತ್ ತೇನ ಹರೇದಸೃಕ್" ||೨೫|| (ಅ. ಹೃ. ಸೂ. ಅ. ೨೬)

## ೧೪ ಕುಠಾರಿಕಾ (Axe)

ಕುಠಾರಿಕಾಕ್ಕೆ ದೇಶ ಭಾಷೆಯಲ್ಲಿ ಕೊಡಲಿ ಎನ್ನುತ್ತಾರೆ. 'ಕುಠಾರ-ತುಲ್ಯಾ ಕುಠಾರಿಕಾ ಕುಠಾರಿಕಾಯಾ ವೃಂತಂ ಸ್ಯಾತ್ ಸಾರ್ಧ ಸಪ್ತಾಂಗುಲಾಯತಮ್ । ಫಲಮರ್ಧಾಂಗುಲಾಯಾಮಂ ಗೋದಂತಸದೃಶಂ ಸಮಮ್॥ (ಇತಿ ಡಲ್ಹಣಃ) ಕುಠಾರಿಕಾದ ವೃಂತವು (ತುದಿ) ೭½ ಅಂಗುಲ ಉದ್ದ ಮತ್ತು ಫಲವು (ತುದಿಯು) ಅರ್ಧಾಂಗುಲ ಅಗಲ, ಸಮ, ಗೋದಂತದ ಸಮಾನವಾಗಿರುತ್ತದೆ. ಇದರ ಕಾರ್ಯವು ಸುಶ್ರುತರು 'ವ್ಯಧನ' ಎಂದು ಬರೆದಿದ್ದಾರೆ. ಈಗೂ ಸಹ ಈ ಪ್ರಕಾರದ Axe-shaped knives [ಕುಠಾರಿಕಾ ತುಲ್ಯ ಚಾಕೂ] ಎಂಬ ಚಾಕುಗಳು ದೊರೆಯುತ್ತವೆ.

---

ಒಂದು ವೇಳೆ ಅರ್ಧಾಂಗುಲ ಮತ್ತು ಗೋಲಾಕಾರದ ಎಂಟು ಕಂಟಕಗಳು ಕಾಷ್ಠದಂಡದ ಒಂದು ತುದಿಗೆ ಹತ್ತಿಕೊಂಡಿದ್ದರೆ ಅದಕ್ಕೆ ಖಜ (ಮಣಿಧಾರಿ) ಎನ್ನುತ್ತಾರೆ. ಇದು ಎರಡೂ ಕೈಗಳಿಂದ ಮೂಗಿನಲ್ಲಿ ಮಥನ ಮಾಡಿ (ಕಡೆದು ಅಥವಾ ತಿರುವಾಡಿ) ರಕ್ತವನ್ನು ತೆಗೆಯುವ ಕೆಲಸದಲ್ಲಿ ಉಪಯೋಗಕ್ಕೆ ಬರುತ್ತದೆ. ಇದರ ಮುಂದೆ ವಾಗ್ಭಟರು ಕರ್ಣಪಾಲೀಯ ವೇಧನಾರ್ಥವಾಗಿಯೂ ಥಿಕಾದ ಉಲ್ಲೇಖವನ್ನು ಮಾಡಿದ್ದಾರೆ. ಹೀಗೆ- "ವ್ಯಧನೇ ಕರ್ಣಪಾಲೀನಾಂ ಯೂಥಿಕಾ ಮುಕುಲಾನನಾ॥೨೬॥" ಮಲ್ಲಿಗೆಯಂತಹ ಹೂವಿನಮೊಗ್ಗೆಯಂತೆ ಮುಖವುಳ್ಳದ್ದರಿಂದ ಇದಕ್ಕೆ ಯೂಥಿಕಾ ಎಂಬ ಹೆಸರಿನಿಂದ ಕರೆಯಲಾಗುತ್ತಿದೆ.

† 'ಪೃಥುಃ ಕುಠಾರೀಗೋದಂತಸದೃಶಾರ್ಧಾಂಗುಲಾನನಾ । ತಯೋರ್ಧ್ವ ದಂಡಯಾ ವಿಧ್ಯೇದುಪರ್ಯಸ್ಥ್ನಾಂ ಸ್ಥಿತಾಂ ಸಿರಾಮ್' ॥೧೩॥ [ಅ. ಹೃ. ಸೂ. ಅ. ೨೬] ಕೊಡಲಿಯು [ಮೇಲ್ಗಡೆಯಿಂದ] ದಪ್ಪ ಮತ್ತು ಅಗಲ, ಗೋದಂತ ಸಮಾನ [ಆಕಳ ಹಲ್ಲಿನ ಸಮಾನ] ½ ಅಂಗುಲ ಅಗಲ ಮುಖವುಳ್ಳದ್ದಿರುತ್ತದೆ. ಅದನ್ನು ಊರ್ಧ್ವ ದಂಡ ಮಾಡಿ [ಹಿಡಿಕೆಯನ್ನು ಮೇಲೆ ಮಾಡಿ] ಅಸ್ಥಿಗಳ ಮೇಲಿನ ಅಥವಾ ಸಂಲಗ್ನ [ಹತ್ತಿಕೊಂಡಿದ್ದ] ಶಿರಾಗಳನ್ನು ಛೇಧನ [ಕತ್ತರಿಸ] ಮಾಡತಕ್ಕದ್ದು.

## ೧೫ ವ್ರೀಹಿಮುಖ (Trocar)

‡ "ವ್ರೀಹಿಮುಖಮಿವಮುಖಂ ಯಸ್ಯತತ್ ವ್ರೀಹಿಮುಖಂ, ತತ್ರಭೋಜಃ :— ಶಸ್ತ್ರಂ ವ್ರೀಹಿಮುಖಂ, ಕಾರ್ಶ್ಯಮಂಗುಲಾನಿ ಷಡಾಯತಮ್ । ದ್ವ್ಯಂಗುಲಂ ತಸ್ಯವೃಂತಮ್ ಸ್ಯಾತ್, ತತ್‌ಫಲಂ ಚತುರಂಗುಲಂ ॥ ತನ್ಮುಖಂ ವ್ರೀಹಿವಿಸ್ತಾರಂ ತನುಸಂಗೂಢ ಕಂಟಕಮ್" [ಡಲ್ಹಣಃ] — ವ್ರೀಹಿ ಎಂಬುದು ಒಂದು ಧಾನ್ಯ ಭೇದವಿದೆ. ಯಾವ ಶಸ್ತ್ರದ ಮುಖವು ತತ್ಸದೃಶವಾಗಿದೆಯೋ ಅದಕ್ಕೆ ವ್ರೀಹಿಮುಖಶಸ್ತ್ರವೆಂದೆನ್ನುತ್ತಾರೆ. 'ಭೋಜ' ಎಂಬುವರು ಅದನ್ನು ೬ ಅಂಗುಲ ಉದ್ದ (ವೃಂತವು ೨ ಅಂಗುಲ ಮತ್ತು ಫಲವು ೪ ಅಂಗುಲ) ಮತ್ತು ವ್ರೀಹಿಯು ಉದ್ದ ಮತ್ತು ಅಗಲವೆಷ್ಟಿದೆಯೋ ಅಷ್ಟು ಅದರ ಮುಖ, ಮುಂದಿನ ಶಿರೋಭಾಗವು ತೆಳ್ಳಗಾಗಿ ಅಥವಾ ಮುಳ್ಳಿನಂತೆ ತೀಕ್ಷ್ಣವಾಗಿರತಕ್ಕದು. ಹೀಗೆ ವರ್ಣನೆ ಮಾಡಿದ್ದಾರೆ.

ವ್ರೀಹಿಮುಖ ಶಸ್ತ್ರವನ್ನು ಈಗ ಅಂಗ್ರೇಜಿಯಲ್ಲಿ ಟ್ರೋಕಾರ ಎಂಡ ಕ್ಯಾನುಲಾ (Trocar and canula) ಎಂದೆನ್ನುತ್ತಾರೆ. ಟ್ರೋಕಾರ (ಕ) ಇದಂತೂ ವ್ರೀಹಿಮುಖವಿದೆ. ಆದರೆ ಅದರ ಮೇಲೆ ಒಂದು ನಳಿಕೆಯು (Tube) ಹತ್ತಿಕೊಂಡಿದೆ. ಅರ್ಥಾತ್ ವ್ರೀಹಿಮುಖಶಸ್ತ್ರವು ನಳಿಕೆ ಎರಡರಲ್ಲೂ 'ಸಂಗೂಢ' ವಾಗಿರುತ್ತದೆ. ಹೀಗೆ— ಭೋಜ ಎಂಬುವರ ಪಾಠದಿಂದ ಸ್ಪಷ್ಟವಾಗುತ್ತದೆ. ಈ ಶಸ್ತ್ರವು ಪ್ರಾಯಃ ಜಲೋದರ (Ascites) ದಲ್ಲಿ ಉದರಸ್ಥ ಜಲವನ್ನು ತೆಗೆಯುವ ಕೆಲಸಕ್ಕೆ ಬರುತ್ತದೆ. ಜಲೋದರ ರೋಗಿಯನ್ನು ಆಸನ [ಕುರ್ಚಿಯ]* ದ ಮೇಲೆ ಕೂಡ್ರಿಸಿ [ಯಾಕಂದರೆ ನೀರು ಉದರದ ಕೆಳಗಿನಭಾಗದಲ್ಲಿ ಏಕತ್ರಿತನಾಗಬೇಕೆಂದು]

---

‡ "ವ್ರೀಹಿವಕ್ತ್ರಂ ಪ್ರಯೋಜ್ಯಂಚ ತಚ್ಛಿರೋದರ ಯೋರ್ವ್ಯಧೇ॥ ॥೧೨॥ [ಅ. ಹೃ. ಸೂ. ಅ. ೨೬] ವಾಗ್ಭಟರು ಇದಕ್ಕೆ ವ್ರೀಹಿಮುಖವೆಂದಿದ್ದಾರೆ. ಈ ಪ್ರಕಾರ ಅಷ್ಟಾಂಗ ಸಂಗ್ರಹದಲ್ಲಿ "ವ್ರೀಹಿಮುಖಂ ಅರ್ಧಾಂಗುಲ ಫಲಂ ಮಾಂಸಲ ಪ್ರದೇಶ ಶಿರಾ ವ್ಯಧಾರ್ಥಂ ವೃದ್ಧ್ಯುದರ ಗುಲ್ಮವಿದ್ರಧ್ಯಾದಿ ವ್ಯಧನ ಭೇದನಾರ್ಥಂಚ|" ಈ ಪ್ರಕಾರದ ಪಾಠವು ದೊರೆಯುತ್ತದೆ

ವ್ರೀಹಿಮುಖ ಶಸ್ತ್ರವನ್ನು ಬಲಪೂರ್ವಕವಾಗಿ ನಾಭಿಗಿಂತ ೪ ಅಂಗುಲ ಕೆಳಗೆ ಮತ್ತು ಸ್ವಲ್ಪ ಒಂದು ಮಗ್ಗಲಿಗೆ ನಡಿಸಿ ಅಥವಾ ಯವ ಮಾತ್ರ ಪ್ರವೇಶ ಮಾಡಿಸಲಾಗುತ್ತಿದೆ. ಪುನಃ ಅದನ್ನು ತೆಗೆದು ನಳಿಕೆ (Tube-canula) ಯನ್ನು(ಯಾವದು ಸ್ವಲ್ಪೇ ತ್ವಚೆಯನ್ನು ಸಿಕ್ಕಿರುತ್ತದೋ)ಹಿಡಿದುಕೊಂಡಿರ ತಕ್ಕುದು. ಇದರಿಂದ ಒಳಗಿನ ಜಲವು ಕಾರಂಜಿ (Fountain) ಯಂತೆ ಧಾರೆಯ ರೂಪವಾಗಿ ಹೊರಗೆ ಬರಹತ್ತುತ್ತದೆ. ಮುಂದೆ ಬಕೀಟು ಅಥವಾ ಅನ್ಯಪಾತ್ರೆಗಳನ್ನಿಟ್ಟು ನೀರನ್ನು ಅದರಲ್ಲಿ ಹಿಡಿಯತಕ್ಕುದು. ಯಾವಾಗ ನೀರಿನಧಾರೆಯು ವೇಗವು ಮಂದಗತಿಯಾಗುವದೋ§ ಆಗ ನಳಿಕೆಯನ್ನು ತೆಗೆದು ರೋಗಿಯನ್ನು ಹಾಸಿಗೆಯ ಮೇಲೆ ಮಲಗಿಸಬೇಕು. ಮತ್ತು ವ್ರಣ (ಘಾಯ) ದ ಮೇಲೆ ಯಾವದಾದರೂ ಸ್ನೇಹ ಹಚ್ಚಿ ಉದರವನ್ನು ವಸ್ತ್ರದಿಂದ ಬಿಗಿದು ಕಟ್ಟಬೇಕು. ಯಾಕಂದರೆ ವಾಯುವು ಹೊಟ್ಟೆಯಲ್ಲಿ ಆಧ್ಮಾನವನ್ನು ಮಾಡಬಾರದು. ಈ ವಿಧಾನವು ನಮ್ಮ ಶಾಸ್ತ್ರದಲ್ಲಿ ಸಮ್ಯಕ್ ರೂಪದಿಂದಲೇ ದೊರೆಯುತ್ತದೆ. † ಮೊದಲು ವ್ರೀಹಿಮುಖ ಪ್ರಯೋಗ ವನ್ನು ಮಾಡಿ ಪುನಃ ನಳಿಕೆಯನ್ನು ಹಚ್ಚಲಾಗುತ್ತಿತ್ತು. ಆದ್ದರಿಂದ

---

* ಒಂದು ವೇಳೆ ರೋಗಿಯು ಅಶಕ್ತನಾಗಿದ್ದರೆ ಹಾಸಿಗೆಯ ಮೇಲೆ ತೆಕ್ಕೆಯನ್ನಿಟ್ಟು ಕೂಡಿಸತಕ್ಕುದು. ಮತ್ತು ಕೆಳಭಾಗದ ಮೇಲೆ ಸ್ನಿಗ್ಧವಸ್ತ್ರ (ಮ್ಯಾಣಗಮಟ) ವನ್ನು ಹಾಕತಕ್ಕುದು. ಯಾಕಂದರೆ ಅಂಗವಾಗಲೀ, ವಸ್ತ್ರವಾಗಲೀ ತೊಯ್ಯಬಾರದು. ವೇಧನದ ಪೂರ್ವದಲ್ಲಿ ಮೂತ್ರವನ್ನು ಮಾಡಿಸುವದೂ ಆವಶ್ಯಕವಾಗಿದೆ.

§ ನೆನಪಿನಲ್ಲಿಡತಕ್ಕುದೇನಂದರೆ— ನೀರನ್ನು ನಿಶ್ಶೇಷವಾಗಿ ತೆಗೆಯಬಾರದು. ಹೇಗೆಂದರೆ— ವಾಗ್ಭಟರು ಚಿಕಿತ್ಸಾ ಸ್ಥಾನ ಅ. ೧೫ ರಲ್ಲಿ ಬರೆದಿದ್ದಾರೆ— "ನಿಧಾಯ ತಸ್ಮಿನ್ನಾಡೀಂ ಚ ಸ್ರಾವಯೇದರ್ಧಮಂಭಸಃ। ಅಥಾಸ್ಯನಾಡೀ ಮಾಕೃಷ್ಯ ತೈಲೇನ ಲವಣೇನ ಚ॥ ವ್ರಣಮಭ್ಯಜ್ಯಬದ್ಧ್ವಾ ಚ ವೇಷ್ಟಯೇದ್ ವಾಸಸೋದರಮ್" ಅ. ಹೃ. ಚಿ. ಅ. ೧೫

† ನೋಡಿರಿ ಸುಶ್ರು ಚಿ. ಅ. ೧೪— "ಉದಕೋದರಿಣಸ್ತು .... ವ್ರೀಹಿಮುಖೇನ.... ವಿಧ್ಯೇತ್॥"

ಸುಶ್ರುತರು ನಳಿಕೆಯನ್ನು ನಾಡೀ ಯಂತ್ರಗಳಲ್ಲಿ ವರ್ಣನೆಯನ್ನು ಮಾಡಿದ್ದಾರೆ. ಪರಂತು ಈಗ ನಳಿಕೆಯು ವ್ರೀಹಿಮುಖದ ಮೇಲೆ ಹತ್ತಿಕೊಂಡಿರುತ್ತದೆ. ಆದ್ದರಿಂದ ಅದಕ್ಕೆ ಆಂಗ್ರೇಜಿಯಲ್ಲಿ Trocar and canula (ವ್ರೀಹಿಮುಖ ಮತ್ತು ನಳಿಕೆ) ಎಂದೆನ್ನಲಾಗುತ್ತಿದೆ. ಪ್ರಯೋಗದನಂತರ ಶಸ್ತ್ರ ಮುಖದ ಮೇಲೆ ಒಂದು ಪಿಧಾನ (ಮುಚ್ಚಳ-ಟೊಪ್ಪಿಗೆ-Cap)ವನ್ನು ರಕ್ಷಾರ್ಥವಾಗಿ ಹಚ್ಚಲಾಗುತ್ತಿದೆ.

ಈ ಶಸ್ತ್ರವು ಸ್ವಲ್ಪ ಪರಿವರ್ತನೆಯಿಂದ ಮೂತ್ರ ವೃದ್ಧಿ † (Hydrocele-ಅಂಡಕೋಶದಲ್ಲಿ ನೀರು ತುಂಬುವದು) ಯಲ್ಲಿಯ ನೀರನ್ನು ತೆಗೆಯುವ ಕೆಲಸಕ್ಕೂ ಬರುತ್ತದೆ. ಪ್ರಾಚೀನ ಕಾಲದಲ್ಲಿ ಇವನ್ನು ಶಿರಾವೇಧನಾರ್ಥವಾಗಿಯೂ ಉಪಯೋಗಿಸಲಾಗುತ್ತಿತ್ತು.

## ೧೬. ಆರಾ ( Awl )

"ಆರಾ ಚರ್ಮಕಾರಾಣಾಂ ಶಸ್ತ್ರಮ್" (ಡಲ್ಹಣಃ) ಆರಾ ಎಂಬುವ ಹೆಸರು ಉಳಿ (Shoe- maker's awl) ಇರುತ್ತದೆ. ಇದನ್ನು ಚಮ್ಮಾರರು ಜೋಡುಗಳ (ಪಾದರಕ್ಷೆಯು)ನ್ನು ಹೊಲಿಯಲಿಕ್ಕೆ ಉಪಯೋಗಿಸುತ್ತಾರೆ. ಇದಾದರೂ ಭೇದನಾರ್ಥವಾಗಿಯೂ ಪ್ರಯುಕ್ತವಾಗುತ್ತದೆ. ಇತ್ತೀಚಿಗೆ ಭೇದನಾರ್ಥವಾಗಿ ಅನೇಕ ಪ್ರಕಾರದ ಸೂಜಿಗಳು ಪ್ರಯೋಗದಲ್ಲಿ ಬರುತ್ತಲಿವೆ. ಆರಾ ಎಂಬುದನ್ನು ಆಮಪಕ್ವ ಶೋಥದ ಸಂಬಂಧದ ಸಂಶಯದಲ್ಲಿ ಪ್ರಯೋಗ ಮಾಡಲಾಗುತ್ತಿದೆ. ಪಕ್ವಾವಸ್ಥೆಯಲ್ಲಿ ಕೀವು ಹೊರಡುತ್ತದೆ. ಮತ್ತು ಆಮಾವಸ್ಥೆಯಲ್ಲಿ ಕೀವು ಮಿಶ್ರಿತ ರಕ್ತ ಅಥವಾ ಕೇವಲ ರಕ್ತವು ಬರುತ್ತದೆ. ಇದಕ್ಕೆ Exploring needle ಎಂದೂ ಸಹ ಎನ್ನಬಹುದು. ಆರಾ ಎಂಬುದನ್ನು ಸ್ಥೂಲ ಕರ್ಣಪಾಲಿಯ ಭೇದನಾರ್ಥವಾಗಿಯೂ ಉಪಯೋಗಿಸಲಾಗುತ್ತಿತ್ತು. *

---

† "ಮೂತ್ರಜಾಂ ಸ್ವೇದಯಿತ್ವಾತು ವಸ್ತ್ರ ಪಟ್ಟೇನವೇಷ್ಟಯೇತ್॥ ಸೇವನ್ಯಾಃ ಪಾರ್ಶ್ವತೋಽಧಸ್ತಾದ್ವಿಧ್ಯೇದ್ ವ್ರೀಹಿಮುಖೇನತು॥" ಸು. ಚಿ ೫ ೧೯

## ೧೭. ವೇತಸಪತ್ರ

ವೇತಸ ಪತ್ರ (ಸದಂತುರ) ದಂತೆ ಸಸುಂದರ (Serrated) ವೃದ್ಧಿ ಪತ್ರಕ್ಕೆ ವೇತ್ರಸಪತ್ರ ಎನ್ನುತ್ತಾರೆ.

ಕೆಲವು ವೈದ್ಯರು ಇದಕ್ಕೆ ಸಸುಂದರವಾಗಿದೆ ಎಂಬುದನ್ನು ಒಪ್ಪುವದಿಲ್ಲ. ಮತ್ತು ಉದ್ದವಾಗಿ ತೀಕ್ಷ್ಣ ಧಾರೆಯುಳ್ಳ ಚಾಕೂ (Narrow-Bladed knife) ಎಂದೆನ್ನುತ್ತಾರೆ.

## ೧೮. ಬಡಿಶ (Sharp hooks)

† "ಬಡಿಶಂದಂತ ಶಂಕುಶ್ಚಾ ನತಾಗ್ರೇ" (ಸುಶ್ರುತ) ಬಡಿಶ ಮತ್ತು ದಂತಶಂಕು ನತಾಗ್ರ (ಮಡಚಿದ ತುದಿಯುಳ್ಳವು) ಆಗಿರತಕ್ಕುದು. ವಡಿಶವನ್ನು ನಾವು ಹಿಂದೆ ಉದಹರಿಸಿದ್ದೇವೆ. ಅಲ್ಲಿ ಅವು ಸ್ಥೂಲಾಗ್ರವಾಗಿವೆ. ಮತ್ತು ಇಲ್ಲಿ ತೀಕ್ಷ್ಣಾಗ್ರವಾಗಿವೆ. ಉಳಿದದ್ದು ಯಾವ ಅಂತರವಿಲ್ಲ. ಒಂದು ಗ್ರಂಥದಲ್ಲಿ ಈ ಪಾಠವು ದೊರೆಯುತ್ತದೆ. "ಬಡಿಶೆ ಚಾಪಿ ಕರ್ತವ್ಯೇ ಪ್ರಮಾಣೇನ ಷಡಂಗುಲೆ । ಸ್ವಾನತಂತುತಯೋರೇಕಮೇಕಂ ನಾತ್ಯಾನತಂಭವೇತ್। ಅರ್ಧಪಂಚಾಗುಲಂವೃಂತಂ ಶೇಷಂ ಕಾರ್ಯಂಮುಖಂ ತಯೋಃ॥ ಅರ್ಧಚಂದ್ರಾಕೃತಿಂ ವಕ್ರಂಕಾರ್ಯಂ ನತ್ಯಾನತಸ್ಯತು॥ ಸ್ವಾನತಂ ನಾಮಯೇತ್ ತತ್ರಬಡಿಶಂ ಚ ಭಿಷಗ್ವರಃ।ವೃಂತಾಗ್ರಯೋರಂತರಂ ಸ್ಯಾದ್ ಯಾವದರ್ಧಾಂಗುಲಂ ಮತಮ್।ಏವಂ ಹಿಕ್ರಿಯೇತೆ ಏತೌ" ವಡಿಶಎಂಬುವು ೬ ಅಂಗುಲ ಪ್ರಮಾಣದ ೨ಪ್ರಕಾರದ ವಿರುತ್ತವೆ. ೧) ಸ್ವಾನತ (ಸುಲನತ) ಮತ್ತು ೨) ಅರ್ಧಚಂದ್ರಾಕಾರ (Half curved) ಅಥವಾ ನ ಅತಿಅನತ

---

* "ಆರಾರ್ಧಾಂಗುಲವೃತ್ತಾಽಸ್ಯಾ ತತ್ ಪ್ರವೇಶಾ ತಥೋರ್ಧ್ವತಃ। ಚತುರಸ್ರಾತಥಾವಿಧ್ಯೇಚ್ಛೋಫಂ ಪಕ್ವಾಮಸಂಶಯೇ ॥೨೭॥ ಕರ್ಣಪಾಲೀಂಚ ಬಹಲಾಂ .... ॥೨॥ ಅ. ಹೃ. ಸೂ. ಅ. ೨೬

§ "ಬಡಿಶೋಽತ್ಯವನತಃ ಸೂಚೀ ತೀಕ್ಷ್ಣಾಗ್ರೋ ಗ್ರಹಣೇ ಗಲಶುಂಡಿಕಾಮಾರ್ದೇಃ" — (ಅಷ್ಟಾಂಗ ಸಂಗ್ರಹಃ) ಏವಂ "ಗ್ರಹಣೇ ಶುಂಡಿಕಾಮಾರ್ದೇರ್ಬಡಿಶಂ ಸುನತಾನನಮ್ ॥೧೭॥ ಅ.ಹೃ.ಸೂ.ಅ. ೨೬

(ಅತ್ಯಂತ ಬಗ್ಗಿದ ಮಣಿದವಲ್ಲದವು) ಬಡಿಶವು ಮತ್ಸ್ಯವೇಧಕ ಕಂಟಕ (ಮೀನವನ್ನು ಹಿಡಿಯುವವಟಿಳ್ಳಿನಂತೆ Fishing hook)ಕ್ಕೆ ಎನ್ನುತ್ತಾರೆ.

## ೧೯. ದಂತಶಂಕು (Tooth scaler)

ಇದನ್ನು ಚಿತ್ರದಲ್ಲಿ ತೋರಿಸಲಾಗಿದೆ. ಇದರ ಕಾರ್ಯವು ದಂತ ಶರ್ಕರಾ (Tartar) ದ ಲೇಖನ ಮಾಡುವದಿದೆ. ಭೋಜತಂತ್ರದಲ್ಲಿ ಈ ಪಾಠವು ದೊರೆಯುತ್ತಿದೆ. "ದಂತಶಂಕುರ್ವಿಜಾನತಾ। ಶಂಕುವಚ್ಚ ಮುಖಂ ಶಸ್ಯಕಾರ್ಯಮರ್ಧಾಂಗುಲಾಯುತಮ್ । ಚತುರಸ್ರಂಸಮಂ ಚೈವ ತೀಕ್ಷ್ಣಧಾರಂ ಸಮಾಹಿತಮ್ । ವೃಂತಾಗ್ರಂ ತಸ್ಯ ಕರ್ತವ್ಯಂ ಶಸ್ತ್ರ ವ್ರೀಹಿಮುಖಾಕೃತಿ। ಕಪಾಲಿಕಾಂ ಶರ್ಕರಾಂ ಚ ದಂತಸ್ಥಾಂ ತೇನ ಶೋಧಯೇತ್" (ಡಲ್ಹಣಃ) ಇದು ಅರ್ಧಾಂಗುಲ ಅಗಲ ಶಂಕು ಸಮಾನ ವಿದೆ. ಇದರ ಧಾರೆಯು ತೀಕ್ಷ್ಣವಿರತಕ್ಕದು. ಚತುಷ್ಕೋಣ ವ ಸಮ ವಿರಬೇಕು. ವಾಗ್ಭಟರು ಇದಕ್ಕೆ ದಂತ ಲೇಖನಕ † ಎಂದಿದ್ದಾರೆ. ಆಧುನಿಕ ದಂತವಿಜ್ಞಾನ (Dentistry) ದಲ್ಲಿ ಪ್ರಚಲಿತವಾದ Tooth scaler (Dental scaler) ಆಧುನಿಕ ದಂತಶಂಕು (Modern tooth scaler) ಇದರ ಹಸ್ತಗ್ರಹ (ಹಿಡಿಕೆ) ವು ಉದ್ದವಾಗಿರುತ್ತದೆ. ಅದರ ಮುಖದಲ್ಲಿ ದಂತಶಂಕು ಯಾವದು ೧೨ ಪ್ರಕಾರದ್ದಿರುತ್ತದೆಯೋ ಒಂದೊಂದೇಆಗಿ ಹಚ್ಚಲಾಗುತ್ತಿದೆ. ಇವುಗಳಲ್ಲಿ ೩ಶಂಕು ಬೇರೆಬೇರೇ ೨ಇವು ಭಿನ್ನಭಿನ್ನ ಹಲ್ಲುಗಳ ಲೇಖನಾರ್ಥವಾಗಿ ಉಪಯೋಗೀ ಇರುತ್ತವೆ ದಂತ

---

* "ಏಕಧಾರಂ ಚತುಷ್ಕೋಣಂ ಪ್ರಬದ್ಧಾಕೃತಿ ಚೈಕತಃ। ದಂತ ಲೇಖನಕಂ ತೇನ ಶೋಧಯೇದ್ದಂತಶರ್ಕರಾಮ್ ॥೨೧॥ (ಅ. ಹೃ. ಸೂ. ಅ. ೨೬) ದಂತ ಲೇಖನಕವು (ಹಲ್ಲುಗಳನ್ನು ಕೆತ್ತುವ ಕೆರಿಯುವ) ಒಂದೇ ಧಾರೆಯುಳ್ಳ (Single-edged) ಚತುಷ್ಕೋಣ, ಒಂದು ಕಡೆಗೆ ಬೆಳೆದ ದಂತಶರ್ಕರಾ (ಹಲ್ಲುಗಳ ಮಲ) ವನ್ನು ತೆಗೆಯುವ ಕೆಲಸದಲ್ಲಿ ಬರುತ್ತದೆ. ಇದಕ್ಕೆ ಅಂಗ್ರೇಜಿಯಲ್ಲಿ Tooth Pike (ಟೂಥಪಾಯಿಕ್) ಎಂದೂ ಅನ್ನುತ್ತಾರೆ.

ಮಾಂಸ ಶಂಕು (Gumlancet) ಇದು ದಂತ ವೇಷ್ಟದ ಮೇಲೆ ಉತ್ಪನ್ನ ಶೋಥ ಅಥವಾ ವಿದ್ರಧಿ (ದಂತಪುಪ್ಪುಟಕ, Gum Abscess) ಯಿಂದ ರಕ್ತಸ್ರಾವಾರ್ಥವಾಗಿ ಪ್ರಯೋಗಿಸಲಾಗುತ್ತಿದೆ. ಬಿಸ್ತ್ರೀಯಲ್ಲಿ ವೃದ್ಧಿ ಪತ್ರದ ಸಂಗಡ ಇವನ್ನೂ ಹಚ್ಚಲಾಗುತ್ತಿದೆ. ಅರ್ಥಾತ್ ಬಿಸ್ತ್ರೀಯಲ್ಲಿ ಒಂದು ಕಡೆಗೆ ಅಂಚಿತಾಗ್ರ ವೃದ್ಧಿ ಪತ್ರ ಮತ್ತು ಮತ್ತೊಂದು ಕಡೆಗೆ ದಂತವೇಷ್ಟ ಶಂಕು ಇರುತ್ತವೆ. ಅದಕ್ಕೆ Syme's knife and gum laneet ಎನ್ನುತ್ತಾರೆ. ಇದನ್ನು ವೈದ್ಯರು ತಮ್ಮ ಹತ್ತರ ಅವಶ್ಯವಾಗಿ ಇಡ ತಕ್ಕದು.

## ೧೦. ಏಷಣೀ (Sharp probe —)

"ಏಷ್ಯತೇ ಅನಯಾ ಇತಿ ಏಷಣೀ " (ಡಲ್ಹಣಃ) ಇದರಿಂದ ವ್ರಣ ಮಾರ್ಗದ ಅನ್ವೇಷಣ (ಶೋಧಮಾಡುವದು– ಹುಡುಕುವದು) ಮಾಡ ಲಾಗುತ್ತಿದೆ. ಅದಕ್ಕೆ ಏಷಣೀ ಎಂದೆನ್ನುತ್ತಾರೆ. ಸುಶ್ರುತರು ಇದರ ಕಾರ್ಯವು ಏಷಣ ಮತ್ತು ಅನುಲೋಮನ ("ಏಷಣೀ ಏಷಣೇ ಅನು ಲೋಮ್ಯೇಚ) ಎಂದು ಬರೆದಿದ್ದಾರೆ. ಭೇದನಾರ್ಥವಾಗಿಯೂ ಇದು ಕೆಲ ಸಕ್ಕೆ ಬರುತ್ತದೆ. ಇದು ಅನ್ವೇಷಣಾರ್ಥವಾಗಿ ಉಪಯೋಗಉಳ್ಳದ್ದಾಗಿದೆ. ಅನುಲೋಮನೀ ಏಷಣಿಗೆ ಈಗ ಡಾಯರೆಕ್ಟರ (Director– ಮಾರ್ಗ ಪ್ರದರ್ಶಕ) ಎಂದೆನ್ನುತ್ತಾರೆ. ಇದರ ಒಂದು ಶಿರೋಭಾಗವು ಹಲಚಿಯಾಗಿ (Flat) ಮತ್ತು ಪಾತರಗಿತ್ತಿಯ ಆಕಾರ (Butterfly– Shaped) ವಾಗಿರುತ್ತದೆ. ದಂಡದ ಮಧ್ಯದಲ್ಲಿ ನಾಡೀ (Groove) ಮತ್ತು ಎರ ಡನೇ ಭಾಗವು ಗಂಡೂಪದಾಕಾರ ಇರುತ್ತದೆ. ಇದಕ್ಕೆ ಅಂಗ್ರೇಜಿಯಲ್ಲಿ Director with tongue tie and probe ಎನ್ನುತ್ತಾರೆ. ಇದರ ಒಂದು ಶಿರೋಭಾಗವು ಚೂಪವಾಗಿ, ಮಧ್ಯದಲ್ಲಿ ನಳಿಕೆ (Groove) ಮತ್ತು ಎರಡನೇಭಾಗವು (ಪ್ರಾಂತವು)ತಾಲಸದೃಶ (Scoop Shaped)

---

† Dental ಇದು ನಮ್ಮ 'ದಂತ' ಶಬ್ದದಿಂದಲೇ ಆಗಿದೆ. ಅಂಗ್ರೇಜಿಯ ೮೦% ರಂತೆ ಶಬ್ದಗಳು ಸಂಸ್ಕೃತದಿಂದ ಹುಟ್ಟಿರುತ್ತವೆ.

ಇರುತ್ತದೆ. ಈ ಏಷಣಿಗೆ ಅಂಗ್ರೇಜಿಯಲ್ಲಿ Director with aural Scoop ಎನ್ನುತ್ತಾರೆ. ಇವು ಎರಡು ಅನುಲೋಮನಾರ್ಥವಾಗಿ ಪ್ರಯುಕ್ತವಾಗುತ್ತವೆ. ಅರ್ಥಾತ್ ನಾಡೀ ವ್ರಣ, ಭಗಂದರಾದಿಗಳಲ್ಲಿ ಏಷಣಿಯನ್ನು ಹಾಕಿ ಮತ್ತು ವೃದ್ಧಿಪತ್ರನಳಿಕೆಯ ಸಂಗಡವೇ ಉಪಯೋಗಿಸಿ ಪಾಟನ ಕ್ರಿಯಾ (Incision) ಮಾಡತಕ್ಕುದು. ಹೇಗೆಂದರೆ:— ಏಷಣೀಂದತ್ವಾ ಶಸ್ತ್ರಂಪಾತಯೇತ್"। ಒಂದುವೇಳೆ ಏಷಣಿಯು ವ್ರಣದ ಒಳಗೆ ಇರದಿದ್ದರೆ ಅನ್ಯತ್ರ ( ಎರಡನೇಕಡೆಗೆ ) ಘಾಯವಾಗುವ ಭಯವಿರುತ್ತದೆ. ಇದೇ ಅನುಲೋಮದ ( Direeting ) ಅರ್ಥವಿದೆ. ಏಷಣಿಯನ್ನು ಹಿಡಿಯುವದು ಮತ್ತು ತಿರುಗಿಸುವದಿದೆ. ತಾಲ (Scoop) ದಿಂದ ಲೇಖನ ಕಾರ್ಯ (Scraping) ಹಾಗೂ ಕರ್ಣಶೋಧನ ಕಾರ್ಯವಾಗುತ್ತದೆ ಆಧುನಿಕ ಶಲ್ಯ ಶಾಸ್ತ್ರದಲ್ಲಿ Hernia Director (ಅಂತ್ರವೃದ್ಧಿ ಏಷಣೀ) ಮತ್ತು Aneurism Needle (ಸೂತ್ರಾನುಲೋಮಕ) ದ ಸಮಾವೇಶವೂ ಏಷಣೀ (೧) ಯಲ್ಲಿಯೇ ಆಗುತ್ತದೆ.

ಅಧ್ಯಾಯಾರಂಭದಲ್ಲಿ ಸುಶ್ರುತರು ೨೦ ಶಸ್ತ್ರಗಳ ವರ್ಣನೆಯನ್ನು ಮಾಡಿದ್ದಾರೆಂದು ನಿರ್ದೇಶ ಮಾಡಿದ್ದೆವು. ತದ್ವಿಪರೀತವಾಗಿ ವಾಗ್ಭಟರು ೨೬ ಶಸ್ತ್ರಗಳನ್ನು ವರ್ಣಿಸಿದ್ದಾರೆ.

---

(೧) "ಗತೇರನ್ವೇಷಣೇ ಶ್ಲಕ್ಷ್ಣಾ ಗಂಡೂಪದ ಮುಖ್ಯೈಷಣೀ ॥೫॥ ಭೇದನಾರ್ಥೇಽಪರಾ ಸೂಚೀ ಮುಖಾ ಮೂಲನಿವಿಷ್ಟಖಾ॥" (ಅ. ಹೃ. ಸೂ. ಅ. ೨೬) ಗತಿ (ವ್ರಣಮಾರ್ಗ) ಯ ಅನ್ವೇಷಣ ಮಾಡಲಿಕ್ಕೆ (To-explore a sinus) ಏಷಣೀಯು ಪ್ರಯುಕ್ತವಾಗುತ್ತಿದೆ. ಇದು ಮೃದು ಮತ್ತು ಗಂಡೂಪದಮುಖೀ ( ಮುಂದುಗಡೆ ಸ್ಥೂಲವಾದದ್ದು ) (Blunt probe) ಇರತಕ್ಕದ್ದು. ಇದರ ಹೊರತಾಗಿ ಮತ್ತು ಒಂದು ಸೂಚೀಮುಖೀ (Sharp probe) ಯು ಭೇದನಾರ್ಥವಾಗಿ ಪ್ರಯುಕ್ತವಾಗಿರುತ್ತದೆ. ಇದರ ಮೂಲದಲ್ಲಿ ಸೂಚೀಪಾಶ (Thread hole) ವಿರುತ್ತದೆ. ವಸ್ತುತಃ ಗಂಡೂಪದ ಮುಖಿಯನ್ನಂತೂ ಯಂತ್ರಗಳಲ್ಲಿ ಗಣನೆ ಮಾಡತಕ್ಕದ್ದು. ಶಸ್ತ್ರಗಳಲ್ಲಿ ಸೂಚೀಮುಖೀಯ ಸಮಾವೇಶವಾಗುವುದು ಉಚಿತವಾಗಿದೆ.

ತತ್ರ ಮಂಡಲಾಗ್ರ ಕರಪತ್ರೆ ಸ್ಯಾತಾಂ ಛೇದನೇ ಲೇಖನೇಚ, ವೃದಿ
ಪತ್ರ- ನಖಶಸ್ತ್ರ- ಮುದ್ರಿಕಾ- ಉತ್ಪಲಪತ್ರಕ- ಅರ್ಧದಾರಾಣಿ ಛೇದನೇ
ಭೇದನೇಚ, ಸೂಚೀ- ಕುಶಪತ್ರ-ಆಟೀಮುಖ- ಶರಾರೀ ಮುಖ- ಅಂತಃ
ಮುರ್ಖ- ತ್ರಿಕೂರ್ಚಕಾನಿ- ವಿಸ್ರಾವಣೇ, ಏಷಣೀ ಏಷಣೇ ಅನುಲೋ
ಮ್ಯೇಚ, ಸೂಚ್ಯಃ ಸೀವನೇ, ಇತಿ ಅಷ್ಟವಿಧೇ ಕರ್ಮಣಿ ಉಪಯೋಗಃ
ಶಸ್ತ್ರಾಣಾಂ ವ್ಯಾಖ್ಯಾತಃ ||೪|| (ಸು. ಸೂ. ಅ. ೮)

ಶಸ್ತ್ರಗಳ ಈ ಉಪಯೋಗ ವಿಧಿಯನ್ನು ನಾವು ಹಿಂದೆಯೇ ಶಸ್ತ್ರಗಳ ವರ್ಣನೆಯ ಸಂಗಡ ತೋರಿಸಿದ್ದೇವೆ.

## ಶಸ್ತ್ರಗಳ ಗ್ರಹಣವಿಧಿಯು (ಹಿಡಿಯುವ ರೀತಿಯು)

ತೇಷಾಮಥ ಯ ಥಾಯೋಗಂಗ್ರಹಣಸಮಾಸೋಪಾಯಃ ಕರ್ಮಸು ವಕ್ಷ್ಯತೇ- ತತ್ರ ವೃದ್ಧಿಪತ್ರಂ ವೃಂತ ಫಲಸಾಧಾರಣೇ ಭಾಗೇ ಗೃಹ್ಣೀಯಾದ್ಭೇದನಾನ್ಯೇವಂ ಸರ್ವಾಣಿ........ ಶೇಷಾಣಿತು ಯಥಾ ಯೋಗಂ ಗೃಹ್ಣೀಯಾತ್ ||೫|| (ಸು. ಸೂ. ಅ. ೮)

ಈ ಪಾಠವನ್ನು ಸುಶ್ರುತದಲ್ಲಿ ಹಾಗೂ ವಾಗ್ಭಟದಲ್ಲಿ ಸೂ. ಅ. ೨೬ ರಲ್ಲಿ ಶ್ಲೋಕ ೩೨ರಿಂದ ೩೪ರ ವರೆಗೆ ಪಾಠಕರು ಸ್ವಯಂ (ತಾವೇ) ನೋಡಿಕೊಂಡು ಅರ್ಥವನ್ನು ತಿಳಿದುಕೊಳ್ಳ ತಕ್ಕದು. ಯಾವ ಯಂತ್ರ ಅಥವಾ ಶಸ್ತ್ರವು ಯಾವ ಪ್ರಕಾರವಾಗಿ ಹಿಡಿಯ ತಕ್ಕದು ಎಂಬುದು ಅಭ್ಯಾಸದಿಂದ ವಿದಿತವಾಗುತ್ತದೆ.

---

§ ವಾಗ್ಭಟರು ಹೆಚ್ಚಿಗೆ ೬ ಶಾಸ್ತ್ರಗಳನ್ನು ಹೇಳಿದ್ದಾರೆ. ಹೇಗಂದರೆ (೧) ತಾಮ್ರೀಶಲಾಕಾ (Cataract needle) — ಇದು ಲಿಂಗ ನಾಶ. (ನೋತಿಯ ಬಿಂದು Cataract) ದ ವೇಧನಾರ್ಥವಾಗಿ ಪ್ರಯುಕ್ತವಾಗುತ್ತಿತ್ತು: ‘‘ತಾಮ್ರೀಶಲಾಕಾ ದ್ವಿಮುಖೀ ಮುಖೇ ಕುಡುಬಕಾಕೃತಿಃ ಲಿಂಗನಾಶಂತಯಾ ವಿಧ್ಯೇತ್’’| (ಅ. ಹೃ. ಸೂ. ಅ. ೨೬) ಇದರಿಂದ ಕೈಟಾರೈಕ್ಟ್ (ಲಿಂಗನಾಶ) ದಲ್ಲಿ ವೇಧನ ಕ್ರಿಯಾ ಮಾಡಲಾಗುತ್ತಿದೆ.

(೨) ಸರ್ಪಾಸ್ಯ (Snake Lancet) ಇದೂ ಒಂದು ಸಣ್ಣದಾದ ಚಾಕೂ Lancet ವೇ ಇರುತ್ತದೆ. ನಾಸಾರ್ಶ ಮತ್ತು ಕರ್ಣಾರ್ಶದ ಛೇದನದಲ್ಲಿ ಕೆಲಸಕ್ಕೆ ಬರುತ್ತದೆ. “ಸರ್ಪಾಸ್ಯಂ ಘ್ರಾಣ ಕರ್ಣಾರ್ಶಶ್ಛೇದನೇ ಧಾರ್ಂಗುಲಂ ಫಲೆ ||೮|| [ಅ- ಹೃ. ಸೂ. ಅ. ೨೬] [೩, ೪, ೫,]

## ಶಸ್ತ್ರಗಳ ಪ್ರಮಾಣಗಳು.

"ತತ್ರ ನಖ ಶಸ್ತ್ರೈಷಣ್ಯೌ ಅಷ್ಟಾಂಗುಲೆ। ಸೂಚ್ಯೋವಕ್ಷ್ಯಂತೇ ..... ಶೇಷಾಣಿತು ಷಡಂಗುಲಾನಿ॥೭॥ (ಸು. ಸೂ. ಅ. ೮) ಶಸ್ತ್ರಗಳ ಪ್ರಮಾಣವು (Size) ಸ್ಥಾನಾನುಸಾರವಾಗಿ ತೋರಿಸಲಾಗಿದೆ. ಪಾಠಕರು ಇದನ್ನೂ ಸಹ ಗ್ರಂಥದಿಂದಲೇ ನೋಡಿಕೊಂಡು ತಿಳಿದುಕೊಳ್ಳತಕ್ಕದು.

## ಪ್ರಶಸ್ತ ಶಸ್ತ್ರಗಳ ಲಕ್ಷಣಗಳು.

ತಾನಿ ಸುಗ್ರಹಾಣಿ, ಸುಲೋಹಾಣಿ, ಸುಧಾರಾಣಿ, ಸುರೂಪಾಣಿ ಸುಸಮಾಹಿತ ಮುಖಾಗ್ರಾಣಿ, ಅಕರಾಲಾನಿ, ಚೇತಿ ಶಸ್ತ್ರ ಸಂಪತ್ ॥೮॥

(ಸು. ಸೂ. ಅ. ೮)

ಉತ್ತಮ ಶಸ್ತ್ರಗಳು ಈ ಪ್ರಕಾರವಾಗಿರುತ್ತವೆ:— ಅವುಗಳ ಗ್ರಹಣ ಸ್ಥಾನವು (ಹಿಡಿಕೆಯು) (ಮುಷ್ಟಿ– Handle) ಸುಂದರ ಮತ್ತು ದೃಢವಾಗಿರತಕ್ಕದು. ಉತ್ತಮ ಲೋಹ (Steel) ದಿಂದ ಮಾಡಿದವು ಇರಬೇಕು. ಅವುಗಳ ಧಾರೆಯು ತೀಕ್ಷ್ಣವಾಗಿರಬೇಕು. ರೂಪವು ಸುಂದರ, ಮುಖಾಗ್ರ (ಫಲ– Blade) ವು ಸುಸಮಾಹಿತ (ಚನ್ನಾಗಿ ಮಾಡಿದ್ದು,) ಮತ್ತು ಅಕರಾಲ (ಅಸುಂದರ,) ಇರತಕ್ಕದು. ಅರ್ಥಾತ್ ಅವುಗಳ ಧಾರೆಯ ಮೇಲೆ ಕಚ್ಚು ಬಿದ್ದಿರಬಾರದು. (ಕರಪತ್ರ ಒಂದನ್ನು ಬಿಟ್ಟು)

## ಶಸ್ತ್ರಗಳ ದೋಷಗಳು.

ತತ್ರ ವಕ್ರ, ಕುಂಠಂ, ಖಂಡಂ, ಖರಧಾರಂ, ಅತಿಸ್ಥೂಲಂ, ಅತಿ ತುಚ್ಛಂ, ಅತಿದೀರ್ಘಂ, ಅತಿಹ್ರಸ್ವಮಿತ್ಯಷ್ಟೌ ಶಸ್ತ್ರದೋಷಾಃ। ತತ್ ವಿಷ

---

ಕೂರ್ಚ, ಖಜ, ಮತ್ತು ಕತ್ತರಿ ಇವನ್ನು ಮೊದಲೇ ವರ್ಣನೆ ಮಾಡಲಾಗಿದೆ. [೬] ಕರ್ಣವೇದನ ಶಸ್ತ್ರವು ಇವುಗಳಲ್ಲಿ ವಿಶೇಷವಾದದ್ದು. ತಾಮ್ರೀ ಶಲಾಕಾ ಇರುತ್ತದೆ- ಅದರ ಉಲ್ಲೇಖವು ಸುಶ್ರುತ ಉತ್ತರ ತಂತ್ರದ ಅ. ೧೭ ರಲ್ಲಿ ಲಿಂಗನಾಶದ ಶಸ್ತ್ರಕ್ರಿಯೆಯಲ್ಲಿ ದೊರೆಯುತ್ತಿದೆ.

ರೀತಿ ಗುಣ ಮಾದದೀತ, ಅನ್ಯತ್ರ ಕರಪತ್ರಾತ್, ತದ್ಧಿ ಖರಧಾರ ಮಸ್ಥಿಚ್ಛೇದನಾರ್ಥಮ್ ||೯|| (ಸು. ಸೂ. ಅ. ೮)

ಶಸ್ತ್ರಗಳ ಅಷ್ಟದೋಷಗಳು § ಇಂತಿವೆ— ೧) ವಕ್ರ- ಸೊಟ್ಟವಾಗಿ (Curved), ೨) ಕಂಠ- ಧಾರೆಯು ಕುಂಠಿತವಾದದ್ದು (Blunt) ೩) ಖಂಡ- ಮುರಿದದ್ದು (Broken) ೪) ಖರಧಾರ- ಧಾರೆಯು ಅಸಮೀಚೀನ (ಹುರುಬರಕ) (Rough) ವಾಗಿದ್ದು, ೫) ಅತಿಸ್ಥೂಲ ಬಹಳ ದೊಡ್ಡದು (Thick bulky) ೬] ಅತಿ ತುಚ್ಛ ಬಹಳ ಸಂಣದು Tiny (೭) ಅತಿದೀರ್ಘ- ಬಹಳ ಉದ್ದ (Too long) ವಾದದ್ದು, ಮತ್ತು ೮) ಅತಿ ಹ್ರಸ್ವ ಬಹಳ ಗಿಡ್ಡವಾದದ್ದು (Too small), ಕರಪತ್ರ ಒಂದನ್ನು ಬಿಟ್ಟು (ಯಾಕಂದರೆ ಅಸ್ಥಿಚ್ಛೇದನಾರ್ಥ ಅದು ಖರಧಾರ (Dentated) ವಾಗಿರತಕ್ಕದು. ಉಳಿದವನ್ನು ಮೇಲಿನ ದೋಷಗಳಿಂದ ಮುಕ್ತ (ರಹಿತ) ವಾದುವನ್ನೇ ಸ್ವೀಕರಿಸಿ ಉಪಯೋಗಿಸತಕ್ಕದು.

ತತ್ರಧಾರಾ * ಭೇದನಾನಾಂ ಮಾಸೂರೀ, ಲೇಖನಾನಾಮರ್ಧಮಾಸೂರೀ, ವ್ಯಧನಾನಾಂ ವಿಸ್ರಾವಣಾನಾಂ ಚ ಕೈಶಿಕೀ, ಛೇದನಾನಾಮರ್ಧ ಕೈಶಿಕೀತಿ ||೧೦|| (ಸು. ಸೂ. ಅ. ೮)

ಭೇದನ ಶಸ್ತ್ರಹಾಗೂ ವೃದ್ಧಿಪತ್ರ, ಉತ್ಪಲ ಪತ್ರಾದಿಗಳ ಧಾರೆಯು (Edge) ಮಾಸುರೀ- ಮಸೂರ ದಲದ ತುದಿಯ ಆಕಾರದಂತೆ, ಲೇಖನ ಶಸ್ತ್ರಗಳ ಹಾಗೂ ದಂತಶಂಕು, ಮಂಡಲಾಗ್ರಾದಿಗಳ ಧಾರೆಯು ಅರ್ಧ ಮಾಸುರೀ, ವ್ಯಧನ ಶಸ್ತ್ರಗಳ, ಹಾಗೂ ವೇತಸ ಪತ್ರ ವ್ರೀಹಿಮುಖಾದಿಗಳ

---

* "ಕುಂಠಖಂಡತನುಸ್ಥೂಲ ಹ್ರಸ್ವದೀರ್ಘತ್ವವಕ್ರತಾಃ। ಶಸ್ತ್ರಾಣಾಂ ಖರಧಾರತ್ವಮಷ್ಟೌ ದೋಷಾಃ ಪ್ರಕೀರ್ತಿತಾಃ ||೩೧|| [ಅ. ಹೃ. ಸೂ. ಅ. ೨೬] ಅರ್ಥ ಸುಶ್ರುತವತ್ ಈ ಪ್ರಕಾರ ವಾಗ್ಭಟರುಶಸ್ತ್ರದೋಷಗಳನ್ನು ಹೇಳಿ ಉತ್ತಮ ಶಸ್ತ್ರಗಳ ಲಕ್ಷಣಗಳನ್ನು ಅಧ್ಯಾಯಾರಂಭದಲ್ಲಿಯೇ— "ಶಸ್ತ್ರಾಣಿರೋಮವಾಹೀನಿ .... ಇತ್ಯಾದಿಗಳನ್ನು ಹೇಳಿದ್ದಾರೆ.

§ ಧಾರಾ ಪುನಶ್ಛೇದನಾನಾಂ ಮಾಸುರೀ, ಲೇಖನಾನಾಮರ್ಧಮಾಸುರೀ, ವ್ಯಧನಾನಾಂ ಚ ಕೈಶಿಕೀ" ಇತಿ ಅಷ್ಟಾಂಗ ಸಂಗ್ರಹಃ||

ಧಾರೆಯು ಮತ್ತು ವಿಸ್ರಾವಣ ಶಸ್ತ್ರ, ಆರಾ, ಸೂಚೀ ತ್ರಿಕೂರ್ಚಕಾದಿಗಳ ಧಾರೆಯು (ಫಲವು-ತುದಿಯು)ಕೈಶಿಕೀ ಅಂದರೆ ಕೂದಲುಗಳಂತೆ ತೆಳ್ಳಗಾಗಿ (ಚೂಪಾಗಿ) ಮತ್ತು ಛೇದನ ಶಸ್ತ್ರ ಹಾಗೂ ಕರ್ತರೀ, ವೃದ್ಧಿಪತ್ರ, ಕರ ಪತ್ರಾದಿಗಳ ಧಾರೆಯು ಅರ್ಧಕೈಶಿಕೀ (ಅರ್ಧ ಕೇಶ ತುಲ್ಯ Half the breadth of the hair) ಆಗಿರತಕ್ಕದು.

ಬಡಿಶೋ ದಂತ ಶಂಕುಶ್ಚಾನತಾಗ್ರೇ। ತೀಕ್ಷ್ಣ ಕಂಟಕಪ್ರಥಮ ಯವಪತ್ರಮುಖೀ ಏಷಣೀ, ಗಂಡೂಪದಾಕಾರಮುಖೀಚ ‖೧‖

(ಸು. ಸೂ. ಅ. ೮)

ಬಡಿಶ ಮತ್ತು ದಂತಶಂಕುಗಳು ಅಗ್ರಭಾಗದಲ್ಲಿ ಆನತ (ಮಣಿದವು) ಇರುತ್ತವೆ ಮತ್ತು ಏಷಣಿಯು ೩ಪ್ರಕಾರದ್ದಿರುತ್ತದೆ. ೧) ತೀಕ್ಷ್ಣಕಂಟಕ ತುಲ್ಯ, ೨) ಪ್ರಥಮ ಯವಪತ್ರ (ಜವೆ ಗೋದಿಯ ಮೊದಲನೇ ಮೊಳಕೆ ಯಂತೆ) ತೀಕ್ಷ್ಣ ಮತ್ತು ಚೂಪವಾದದ್ದು, ೩) ಗಂಡೂಪದಾಕಾರ (ಮಳೆ ಹುಳದ ಆಕಾರ) ವಾಗಿರುತ್ತವೆ.

## ಶಸ್ತ್ರಗಳ ಪಾಯನವು

### ಶಸ್ತ್ರಗಳಿಗೆ [ನೀರು] ಕುಡಿಸುವದು [Tempering]

ತೇಷಾಂ ಪಾಯನಾ ತ್ರಿವಿಧಾ ಕ್ಷಾರೋದಕ ತೈಲೇಷು। ತತ್ರಕ್ಷಾರ ಪಾಯಿತಂ ಶರಶಲ್ಯಾಸ್ಥಿ ಛೇದನೇಷು, ಉದಕಪಾಯಿತಂ ಮಾಂಸಚ್ಛೇದನ ಭೇದನಪಾಟನೇಷು, ತೈಲಪಾಯಿತಂ ಸಿರಾವ್ಯಧನ ಸ್ನಾಯುಚ್ಛೇದನೇಷು‖ ‖೧೨‖(ಸು. ಸೂ. ಅ. ೮)

---

‡ ವಾಗ್ಭಟೋಕ್ತ ಶಸ್ತ್ರಕರ್ಮಾಣಿ— "ಉತ್ಪಾಟ್ಯ-ಪಾಟ್ಯ-ಸೀವ್ಯ ಏಷ್ಯಲೇಖ್ಯ-ಪ್ರಚ್ಛನ್ನ-ಕುಟ್ಟನಮ್। ಭೇದ್ಯಂ ಭೇದ್ಯಂ ವ್ಯಧೋಮಂಥೋ ಗ್ರಹೋದಾಹಶ್ಚ ತಶ್‌ಪ್ರಯಾಃ" ‖೩೦‖ ಯಾವ ಕಾರ್ಯದಲ್ಲಿ ಯಾವ ಶಸ್ತ್ರ (ಮತ್ತು ಯಂತ್ರ) ವನ್ನು ಉಪಯೋಗ (ಪ್ರಯೋಗ) ಮಾಡುವದು ಸ್ವಯಂ ವಿಚಾರ ಪೂರ್ವಕವಾಗಿ ನಿಶ್ಚಯಿಸಿರಿ.

§ 'ಕರ್ಮಕೋವಿದಂ ಕರ್ಮಪಂಡಿತಮಿತಿ ಡಲ್ಹಣಃ — ಪಂಡಿತ ಶಬ್ದವು ನಿಪುಣ ವಿದ್ವಾನನ ದೆಶೆಯಿಂದ ಪ್ರಾಚೀನ ಕಾಲದಲ್ಲಿ ಪ್ರಯೋಗಿ (ಉಪಯೋಗಿ-ವ್ಯವಹಾರ) ಸಲ್ಪಡುತ್ತಿತ್ತು.

ಶಸ್ತ್ರಗಳಿಗೆ (ಪಾಯನಾ) (ನೀರು) ಕುಡಿಸುವದು. ಕ್ಷಾರ, ಉದಕ, ತೈಲಗಳಲ್ಲಿ ಎಂದು ೩ ಪ್ರಕಾರವಾಗಿ ಹೇಳಿದೆ. ಕ್ಷಾರವನ್ನು ಕುಡಿಸಿದ ಶಸ್ತ್ರಗಳು— ಶರಶಲ್ಯ ಮತ್ತು ಅಸ್ಥಿಗಳ ಛೇದನೆಯಲ್ಲಿ ಕೆಲಸಕ್ಕೆ ಬರುತ್ತವೆ ನೀರು ಕುಡಿಸಿದವು ಮಾಂಸ ಪೇಶಿಗಳ ಛೇದನ, ಭೇದನ ಮತ್ತು ಪಾಟನ ಕಾರ್ಯದಲ್ಲಿಯೂ ತೈಲ ಕುಡಿಸಿದವು — ಶಿರಾವೇಧನ ಮತ್ತು ಸ್ನಾಯು (ತಂತು ಇತ್ಯಾದಿ) ಗಳ ಛೇದನದಲ್ಲಿ ವ್ಯವಹರಿಸಲ್ಪಡುತ್ತವೆ.

ವಕ್ತವ್ಯ:— "ಪಾಯನಾ ( ಪಾತುಂ ಯೋಜನಾ — ಡಲ್ಹಣ: ) ಲೋಹ (ಉಕ್ಕು–Steel) ವನ್ನು ಸುತಪ್ತ ಮಾಡಿ ನೀರಿನಲ್ಲಿ ಎದ್ದುವದು. ಅಥವಾ ಕುಡಿಸುವದಕ್ಕೆ ಪಾಯನಾ ಎನ್ನುತ್ತಾರೆ. ಇದರಿಂದ ಉಕ್ಕು (ಶಸ್ತ್ರಲೋಹ) ಬಹಳ ಕಠಿಣ (ಬಿರುಸು) ಆಗುತ್ತದೆ. ಇದನ್ನು ಲೋಹಕಾರ (ಕಮ್ಮಾರರು) ಚನ್ನಾಗಿ ತಿಳಿಯುತ್ತಾರೆ. ಈ ಕ್ರಿಯೆಗೆ ವಿಜ್ಞಾನದಲ್ಲಿ Tempering ಎನ್ನುತ್ತಾರೆ. ನೀರಿನ ಹೊರತಾಗಿ ತೈಲ, ದ್ರವಿಭೂತಸೀಸಕ (Molten Lead) ಇತ್ಯಾದಿಗಳಲ್ಲಿಯೂ ಪಾಯನಾ ಕೊಡಲಾಗುತ್ತಿದೆ. ಒಂದು ವೇಳೆ ಶಸ್ತ್ರಗಳಿಗೆ ಪಾನವನ್ನು ಕೊಡದಿದ್ದರೆ ಲೋಹವು ಮೃದುವಾಗಿ ಧಾರೆಯು ಮುರಿದುಕೊಳ್ಳಬಹುದು. ಲೋಹ ಸಂಬಂಧದ ಈ ಉತ್ಕೃಷ್ಟ ಜ್ಞಾನವನ್ನು ನಮ್ಮ ಪ್ರಾಚೀನ ಆರ್ಯರು ತಿಳಿದಿದ್ದರು. ಕುತುಬಮಿನಾರದ ಸಮೀಪದ ಲೋಹಸ್ತಂಭವು ಇದರ ಸಾಕ್ಷೀಭೂತವಾಗಿದೆ. ಅದು ಇಂಥ ಕಠೋರಲೋಹದಿಂದ ಮಾಡಿದೆ. ಅದನ್ನು ಕಡಿಯುವದು ಕಠಿಣವಾಗಿದೆ. ಹಾಗೂ ನೂರಾರುವರ್ಷಗಳು ಗತಿಸಿಹೋದರೂ ಅದರ ಮೇಲೆ ಕಿಟ್ಟ (ಜಂಗು–Rust) ಹತ್ತಿರುವದಿಲ್ಲ. ಇದೂ ಈವತ್ತಿಗೂ ಆಶ್ಚರ್ಯಜನಕವಾಗಿದೆ. ಹೇಗೆಂಬುದು ಮೇಲಿನ ಪಾಠದಿಂದ ಸ್ಪಷ್ಟವಿದೆ.

## ಶಸ್ತ್ರಧಾರ ಸ್ಥಾಪನ ವಿಧಾನವು

ತೇಷಾಂ ನಿಶಾನಾರ್ಥಂ ಶ್ಲಕ್ಷ್ಣಶಿಲಾಮಾಷವರ್ಣಾ; ಧಾರಾಸಂಸ್ಥಾಪನಾರ್ಥಂ ಶಾಲ್ಮಲೀ ಫಲಕಮಿತಿ ॥೧೩॥ [ಸು. ಸೂ. ಅ. ೮] — ಶಸ್ತ್ರಗಳನ್ನು ತೀಕ್ಷ್ಣಧಾರ ಮಾಡಲಿಕ್ಕೆ ಶ್ಲಕ್ಷ್ಣ [ನುಣುಪಾದ, ಮೃದು, ಹುರಬರಕವಿಲ್ಲದ] ಶಿಲಾ [ಪಾಷಾಣಖಂಡ] ಮಾಷವರ್ಣಾ [ಉದ್ದಿನ ಕಾಳ

ನಂತೆ ಹಸರು ಮತ್ತು ಕೃಷ್ಣವರ್ಣವುಳ್ಳದ್ದು] ಇರತಕ್ಕದ್ದು. ಮತ್ತು ಧಾರಾ ಸ್ಥಾಪನಾರ್ಥವಾಗಿ ಶಾಲ್ಮಲೀ ಫಲಕೆ [ಶಾಲ್ಮಲೀ ವೃಕ್ಷದ ಹಲಗೆ] ಇರತಕ್ಕದ್ದು.

ವಕ್ತವ್ಯ:— ಶಸ್ತ್ರಗಳು ಸುಧಾರಾ [ತೀಕ್ಷ್ಣ ಮತ್ತು ಸರಳ ಧಾರೆಯುಳ್ಳವು] ಆಗಿರತಕ್ಕುದು ಆವಶ್ಯಕವಾಗಿದೆ. ಏತದರ್ಥ ಮೂರು ಕ್ರಿಯೆಗಳನ್ನು ಮಾಡಲಾಗುತ್ತಿದೆ. [೧] ಪಾಯನಾ — ಪಾನ ಇದರ ವರ್ಣನೆಯು ಮೇಲೆ ಮಾಡಲಾಗಿದೆ. [೨] ನಿಶಾನ— ಚೂಪು ಮಾಡುವುದು [ಮಸೆಯುವದು] To sharpen the instruments ಮತ್ತು [೩] ಧಾರಾ ಸ್ಥಾಪನ— ಧಾರೆಯನ್ನು ಸ್ಥಿರವಾಗಿರಿಸುವದು. ಮೂಷವರ್ಣ [ಕರೇಕಲ್ಲು] ಶಿಲೆಯ ಮೇಲೆ ಪುನಃ ಪುನಃ ತಿಕ್ಕುವದರಿಂದ ಶಸ್ತ್ರದ ಧಾರೆಯು ತೀಕ್ಷ್ಣವಾಗುತ್ತದೆ. ತದನಂತರ ಅದನ್ನು ಶಾಲ್ಮಲೀ ಫಲದ ಮೇಲೆ ತಿಕ್ಕಿದರೆ ಧಾರೆಯು ಸ್ಥಿರವಾಗುತ್ತದೆ. ನಿಶಾನಾರ್ಥಶಿಲಾಖಂಡಕ್ಕೆ ಅಂಗ್ರೇಜಿಯಲ್ಲಿ Whet stone ಎನ್ನುತ್ತಾರೆ. ಮತ್ತು ಸಂಸ್ಕೃತದಲ್ಲಿ 'ನಿಶಾನೀ' ಎನ್ನಲಾಗುತ್ತಿದೆ. ಇದರ ಅಪಭ್ರಂಶವು ಸಾಣ [ಸಾಣೆಗೆ] ಇದೆ. ಸಾಣೆಗೆ ಹಿಡಿದು ಶಸ್ತ್ರ, ಚಾಕೂ, ಕತ್ತರಿ ಮೊದಲಾದವನ್ನು ತೇಜ ಮಾಡಲಾಗುತ್ತಿದೆ. ಧಾರಾ ಸ್ಥಾಪನಾರ್ಥಕಾಷ್ಠಖಂಡ ಅಥವಾ ಪಟ್ಟಾನೆ ಅಂಗ್ರೇಜಿಯಲ್ಲಿ Strap ಎನ್ನುತ್ತಾರೆ. ಈಗ ಚರ್ಮಕೃತ ಸ್ಟ್ರಾಪು ಸಹ ದೊರೆಯುತ್ತವೆ. ಅದಕ್ಕೆ Leather strap ಎನ್ನುತ್ತಾರೆ. ಅದು ಪ್ರಾಯಃ ನಾವಲಿಗರ ಹತ್ತರ ಕಾಣಿಸಿಕೊಳ್ಳುತ್ತದೆ.

## ಶಸ್ತ್ರಕರ್ಮ ಯೋಗ್ಯ ಶಸ್ತ್ರಲಕ್ಷಣವು

ಯದಾಸುನಿಶಿತಂ ಶಸ್ತ್ರಂ ರೋಮಚ್ಛೇದಿ ಸುಸಂಸ್ಥಿತಮ್। ಸುಗೃಹೀತಂ ಪ್ರಮಾಣೇನ ತದಾಕರ್ಮಸು ‡ ಯೋಜಯೇತ್ ॥೧೪॥
ಸು. ಸೂ. ಅ. ೮

ಶಸ್ತ್ರವು ಸುನಿಶಿತ (ಸಾಣೆಗೆ ಹಿಡಿದು ತೀಕ್ಷ್ಣವಾದದ್ದು) ರೋಮಚ್ಛೇದೀ (ರೋಮವಾಹೀ) ಸುಸಂಸ್ಥಿತ (ಶಾಲ್ಮಲೀ ಫಲಕೆಯಲ್ಲಿ ಸುಸ್ಥಾಪಿತ) ಮತ್ತು ಸುಗೃಹೀತ (ಕೈಯಲ್ಲಿ ವಿಧಿ ಪ್ರಕಾರ ಹಿಡಿದದ್ದು) ವಾಗಿದ್ದರೆ

ಅದನ್ನು ಅಷ್ಟ ವಿಧಕರ್ಮಗಳಲ್ಲಿ (ಪ್ರಮಾಣಕ್ಕಿಂತ ಹೆಚ್ಚೂ ಇಲ್ಲ ಕಡಿಮೆಯೂ ಇಲ್ಲ) ಪ್ರಯೋಗ ಮಾಡತಕ್ಕದ್ದು

# ಶಸ್ತ್ರ ನಿರ್ಮಾಣ ವಿಧಾನ

ಶಸ್ತ್ರಾಣ್ಯೇತಾನಿ ಮತಿಮಾನ್ ಶುದ್ಧಶೈಕ್ಯಾಯಸಾನಿತು । ಕಾರಯೇತ್ ಕರಣಪ್ರಾಪ್ತಂ ಕರ್ಮಾರಂ ಕರ್ಮಕೋವಿದಮ್ ॥೧೯॥

ಸು. ಸೂ. ಅ. ೮

(ಯಂತ್ರ) ಮತ್ತು ಶಸ್ತ್ರಗಳನ್ನು ಮತಿಮಾನ್ (ಬುದ್ಧಿಶಾಲಿಯಾದ ವೈದ್ಯನು) ಶುದ್ಧಶೈಕ್ಯಾಯಸ (ಉತ್ತಮ ತೀಕ್ಷ್ಣಲೋಹ ಉಕ್ಕು-Finest Steel) ದಿಂದ, ಯಾವನು ಕರಣ ಪ್ರಾಪ್ತ (ಉಪಕರಣಗಳಿಂದ ಸಹಿತ— Tools of all kinds) ದಿಂದ ಯುಕ್ತ (ಉಪಕರಣಗಳಿಲ್ಲದೇ ಶಸ್ತ್ರಗಳನ್ನು ಮಾಡುವದು ಹೇಗೆ?) ಮತ್ತು ಕರ್ಮಕೋವಿದನ (ತನ್ನ ಕಾರ್ಯದಲ್ಲಿ ಕುಶಲ -- Efficient in Mechanical Engineering) ನಿರುವನೋ ಅವನಿಂದ ಮಾಡಿಸತಕ್ಕದ್ದು.

ವಕ್ತವ್ಯ:— ಸುಶ್ರುತರ ಸಮಯದಲ್ಲಿ ಎಂಥ ಉತ್ತಮ ಕರ್ಮಾರು [Engineers] ಇರುತ್ತಿದ್ದರು, ಅವರ ಕಾರ್ಯಾಲಯವು [Work—shops] ನಾನಾವಿಧ ಉಪಕರಣ ಮತ್ತು ಯಂತ್ರಗಳಿಂದ [Tools and Machines] ಯುಕ್ತ [Equipped] ಇರುತ್ತಿದ್ದವು. ಅವರು ವೈದ್ಯರ ನಿರೀಕ್ಷಣೆಯಲ್ಲಿ ಶಸ್ತ್ರಗಳನ್ನು ಸಿದ್ಧ ಮಾಡುತ್ತಿದ್ದರು. ಹಾಗೂ ಯುದ್ಧದ ಶಸ್ತ್ರಾಸ್ತ್ರ [War Weapons] ಗಳನ್ನೂ ಸಹ ಸಿದ್ಧಗೊಳಿಸುತ್ತಿದ್ದರು. ಆಗ್ಗೆ ಆರ್ಯ ಜಾತಿಯು ಉತ್ತಮ ಉನ್ನತ ಹಾಗೂ ಸಂಸಾರದ (ಜಗತ್ತಿನ ಶಿಕ್ಷಕ (ಮಾರ್ಗದರ್ಶಕ) ವಾಗಿತ್ತು. ಇದೇ ಕಾರಣದಿಂದ ಮನು ಮಹಾರಾಜರು ಹೀಗೆ ಆದೇಶಪಡಿಸಿದ್ದಾರೆ.

ಏತದ್ದೇಶ ಪ್ರಸೂತಸ್ಯ ಸಕಾಶಾದಗ್ರ ಜನ್ಮನಃ । ಸ್ವಂಸ್ವ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವ ಮಾನವಾಃ॥ ಇತಿ ಮನುಸ್ಮೃತಿ

ಅರ್ಥ:— "ಸಮಸ್ತ ಪೃಥ್ವಿಯ ಎಲ್ಲ ಜನರು ಈ ದೇಶ (ಭಾರತ ವರ್ಷ) ದ ಬ್ರಾಹ್ಮಣರ [ವಿದ್ವಾಂಸ] ರಿಂದ ತಮ್ಮ ಚರಿತ್ರ [ಕಾರ್ಯ-ವ್ಯವ

ಸಾಯ–Pofessions] ವನ್ನು ಕಲಿಯಲಿ" ಆದರೆ ಈಗ ನಾವು ಶಿಕ್ಷಾರ್ಥ ವಾಗಿ ಬೇರೆ ದೇಶಗಳಿಗೆ ಹೋಗಬೇಕಾಗಿದೆ.

ಅನುಶಸ್ತ್ರಾಣಿತು ತ್ವಕ್‌ಸಾರಸ್ಫಟಿಕಕಾಚಕುರುವಿಂದಜಲೌಕಾಗ್ನಿ ಕ್ಷಾರ ನಖಗೋಜೀ ಶೇಫಾಲಿಕಾಪತ್ರಕರೀರಬಾಲಾಂಗುಲಿಯ ಇತಿ ||

ಸು. ಸೂ. ಅ. ೮

ಅನು ಶಸ್ತ್ರ (ಹೀನ ಶಸ್ತ್ರ, ಶಸ್ತ್ರಸದೃಶ, ಉಪಶಸ್ತ್ರಗಳು) ಗಳು ಈ ಪ್ರಕಾರವಿವೆ:— ತ್ವಕ್‌ಸಾರ (ವಂಶ, ಬಿದಿರು Bamboo) ಸ್ಫಟಿಕ (Crystal), ಕಾಚ (Glass), ಕುರವಿಂದ (ಕಠೋರವಾದ ಪಾಷಾಣ ವಿಶೇಷವು– Corundum ಅಥವಾ ರತ್ನ Ruby) ಜಲೌಕಾ (ಜಿಗಳಿ, Leeches), ಅಗ್ನಿ, ಕ್ಷಾರ, ನಖ, ಗೋಜೀ (ಲಾಠಿ) ಗಾಜಬಾನ ಮತ್ತು ಶೇಫಾಲೀ (ಹಾರಸಿಂಗಾರ)ಯ ಪತ್ರ, ಕರೀರ (ಅಂಕುರ ಅಥವಾ ಕೊಂಡಿ) ಕೂದಲು ಮತ್ತು ಬೆರಳು (ಸಂಖ್ಯೆಯಲ್ಲಿ) ೧೩ ದ್ರವ್ಯಗಳಿರುತ್ತವೆ.

ವಕ್ತವ್ಯ— ಶಸ್ತ್ರಗಳು ಸಿಗದಿದ್ದರೆ, ಅಥವಾ ರೋಗಿಯು ಅಂಜಿಕೆ ಯುಳ್ಳವನಾಗಿದ್ದರೆ, ಅನು ಶಸ್ತ್ರಗಳ ಪ್ರಯೋಗವನ್ನು ಮಾಡಬಹುದು. ಹೇಗೆ– ಸಿರಾವೇಧದ ಸ್ಥಾನದಲ್ಲಿ ಜಲೌಕಾ (ಜಿಗಳಿ) ವನ್ನು ಹಚ್ಚುವದು ಸುಗಮವಾಗಿದೆ. 'ಅಶಸ್ತ್ರಾಣ್ಯೇವ ಶಸ್ತ್ರಕಾರ್ಯಂ ಕುರ್ವಂತೀತ್ಯನು ಶಸ್ತ್ರಾಣಿ' (ಇಂದು)|| ಶಸ್ತ್ರಗಳಿಲ್ಲದೇ ಯಾವು ಶಸ್ತ್ರಗಳ ಕಾರ್ಯವನ್ನು ಮಾಡುತ್ತವೋ ಅವು ಅನುಶಸ್ತ್ರಗಳೆನ್ನಿಸಿಕೊಳ್ಳುತ್ತವೆ. ತ್ವಕ್ ಸಾರ ಎಂಬುದು ವಂಶ (ಬಿದಿರು)ದ ನಾಮವಿರುತ್ತದೆ. ಹರಿದ ಬಿದಿರಿನ ತುದಿ ಗಳೂ ಸಹ ಛೇದನ ಕಾರ್ಯವನ್ನು ಮಾಡಬಲ್ಲವಾಗಿವೆ. ಹಾಗೂ ಅವುಗಳ ಚೂಪಾದ ತುದಿಗಳು ಶಲಾಕೆಯ ಕೆಲಸ ಕೊಡುತ್ತವೆ. ಅಸ್ಥಿಭಗ್ನದ ಮೇಲೆ ಬಿದಿರಿನ ತುಣುಕುಗಳನ್ನು ಕುಶಾ [Splint] ದಂತೆ ಕಟ್ಟುತ್ತಾರೆ. ಕಾಚು, ಸ್ಫಟಿಕ, ಕುರವಿಂದಾದಿ ಶಸ್ತ್ರಗಳ ನಿರ್ಮಾಣದಲ್ಲಿ ಅಥವಾ ತೀಕ್ಷ್ಣ ಮಾಡುವದರಲ್ಲಿ ಪ್ರಯುಕ್ತವಾಗುತ್ತವೆ. ಕಾಚು, ಮತ್ತು ಸ್ಫಟಿಕ (Pebbles) ಗಳಂತೂ ಈಗ ಉಪನೇತ್ರ (ಚಾಳಿಸು Spectacles) ಗಳನ್ನು ಮಾಡುವದರಲ್ಲಿ ಕೆಲಸಕ್ಕೆ ಬರುತ್ತವೆ. ಜಲೌಕಾ, ಅಗ್ನಿ ಮತ್ತು ವರ್ಣನೆಯನ್ನು ಸಂಕ್ಷಿಪ್ತತರ ಮುಂದಿನ ಅಧ್ಯಾಯದಲ್ಲಿ ನೋಡಿರಿ. ನಖ

ದಿಂದಲೂ ಕೆಲವು ಸಾರಿ ಸ್ಫೋಟ, ಪಿಡಿಕಾ (ಬಕ್ಕೆ) ಮೊದಲಾದವುಗಳ ಭೇದನ ಮಾಡಲಾಗುತ್ತಿದೆ. ಗೋಭೀ (ಲಾರಿ) ಅಥವಾ ಗೌಜಬಾನ (ಆಕಳ ನಾಲಿಗೆಯ ಸದೃಶ) ಮತ್ತು ಶೇಫಾಲೀ ಪತ್ರವು ಖರ (Rough) ಇರುವದರಿಂದ ಲೇಖನ (Scraping) ದಲ್ಲಿ ಕೆಲಸಕ್ಕೆ ಬರುತ್ತವೆ. ಹೀಗೆಯೇ ಅವುಗಳ ಅಂಕುರವು ಗಂಡೂಪದಮುಖೀ ಏಷಣಿಯಂತೆ ಕೆಲಸಕ್ಕೆ ಬರುತ್ತದೆ. ಕರೀರದ ಅರ್ಥವು ಕರೀಲ ಮರುಭೂಮಿಯಲ್ಲಿ ಹುಟ್ಟಿದ ಕಂಟಕ ಉಳ್ಳ ಪಾದಪ (ಗಿಡವು) ವೆಂದೂ ಆಗುತ್ತದೆ. ಇದರ ಮುಳ್ಳುಗಳು ಏಷಣೀ, ಸೂಚೀ, ವಡಿಶಾದಿಗಳಂತೆ ಭೇದನ ಕಾರ್ಯವನ್ನು ಮಾಡುತ್ತವೆ. ಬೆರಳಿನಿಂದ ವ್ರಣಾದಿಗಳನ್ನು ಒತ್ತಿ ಕೀವು ರಕ್ತಾದಿಗಳನ್ನು ತೆಗೆಯುವದುಂಟು. ಅಥವಾ ಅಗಲ ಮುಖವುಳ್ಳ ವ್ರಣಗಳಲ್ಲಿ ಬೆರಳನ್ನು ಹಾಕಿ ಏಷಣ ಕ್ರಿಯೆಯನ್ನು ಮಾಡಲಾಗುತ್ತಿದೆ. ಕೂದಲು (ಕುದುರೆಯಜವೆ) ಚರ್ಮ ಕೀಲವನ್ನು ಕತ್ತರಿಸುವಲ್ಲಿ ಶಸ್ತ್ರದಂತೆ ಕೆಲಸಮಾಡುತ್ತದೆ. ಅಶ್ವತ್ಥ ಪತ್ರದ ನಾಳದಿಂದಲೂ ಏಷಣವಾಗುತ್ತದೆ. ವಸ್ತುತಃ ಬುದ್ಧಿಮಾನ್ ವೈದ್ಯನು ಸಂಸಾರದ ಪ್ರತ್ಯೇಕ ವಸ್ತುವನ್ನು ಚಿಕಿತ್ಸಾ ಹಾಗೂ ಶಸ್ತ್ರಕರ್ಮದಲ್ಲಿ ಪ್ರಯೋಗ ಮಾಡಬಲ್ಲನು.

## ಅನುಶಸ್ತ್ರಗಳ ಪ್ರಯೋಗವು.

ಶಿಶೂನಾಂ ಶಸ್ತ್ರಭೀರೂಣಾಂ ಶಸ್ತ್ರಾಭಾವೇ ಚ ಯೋಜಯೇತ್ ।
ತ್ವಕ್ ಸಾರಾದಿ ಚತುರ್ವರ್ಗಂ ಭೇದ್ಯೇ ಭೇದ್ಯೇ ಚ ಬುದ್ಧಿಮಾನ್ ॥೧೬॥

ಆಹಾರ್ಯಚ್ಛೇದ್ಯಭೇದ್ಯೇಷು ನಖಂ ಶಕ್ಯೇಷು ಯೋಜಯೇತ್ ।
ವಿಧಿಃ ಪ್ರವಕ್ಷ್ಯತೇ ಪಶ್ಚಾತ್ ಕ್ಷಾರವಹ್ನಿ ಜಲೌಕಸಾಮ್ ॥೧೭॥

ಯೇಸ್ಯುರ್ಮುಖಗತಾ ರೋಗಾ ನೇತ್ರವರ್ತ್ಮಗತಾಶ್ಚಯೇ ।
ಗೋಜೀಶೇಫಾಲಿಕಾಶಾಕಪತ್ರೈರ್ವಿಸ್ರಾವಯೇತ್ತುತಾನ್ ॥೧೮॥

ಏಷ್ಯೇಷ್ವೇಷಣ್ಯಲಾಭೇತು ಬಾಲಾಂಗುಲ್ಯಂಕುರಾಹಿತಾಃ ॥

ಅರ್ಧ-ಶಿಶು ವ ಶಸ್ತ್ರ ಭೀರುಗಳ ದೆಶೆಯಿಂದ ಹಾಗೂ ಶಸ್ತ್ರಗಳ ಅಭಾವದಲ್ಲಿ ಬುದ್ಧಿವಾನ್ ವೈದ್ಯನು ಅನುಶಸ್ತ್ರಗಳ ಪ್ರಯೋಗವನ್ನು ಮಾಡತಕ್ಕದ್ದು. ತ್ವಕ್ ಸಾರಾದಿ ನಾಲ್ಕು ವಸ್ತುಗಳು ಛೇದ್ಯ ಭೇದ್ಯದಲ್ಲಿ ವ್ಯವಹರಿಸಲ್ಪಡುತ್ತವೆ. ನಖವು ಒಂದು ವೇಳೆ ಸಂಭವಿಸಿದರೆ, ಆಹರಣ, ಛೇದನ, ಭೇದನದಲ್ಲಿ ವ್ಯವಹಾರ ಮಾಡತಕ್ಕದು. ಕ್ಷಾರ, ಅಗ್ನಿ ಮತ್ತು ಜಲೌಕಾದ ವಿಧಿಯನ್ನು ಮುಂದೆ ಹೇಳಲಾಗುತ್ತಿದೆ. ಮುಖ ಮತ್ತು ನೇತ್ರವರ್ತ್ಮಗತರೋಗ (ಕಣ್ಣಿನ ರೆಪ್ಪೆಯರೋಗ) ಇತ್ಯಾದಿಗಳಲ್ಲಿ ಗೋಜೀ, ಶೇಫಾಲಿಕಾದಿಗಳ ಖರ- ಪತ್ರಗಳಿಂದ ವಿಸ್ರವಣ ಮಾಡತಕ್ಕದ್ದು. ಏಷಣಿಯು ದೊರೆಯದಿದ್ದರೆ ಏಷ್ಯ ರೋಗಗಳಲ್ಲಿ ಕೂದಲು, ಬೆರಳು ಹಾಗೂ ಅಂಕುರಗಳ ಪ್ರಯೋಗವನ್ನು ಮಾಡತಕ್ಕದು.

ಪ್ರಯೋಗಜ್ಞಸ್ಯ ವೈದ್ಯಸ್ಯ ಸಿದ್ಧಿರ್ಭವತಿ ನಿತ್ಯಶಃ। ತಸ್ಮಾತ್ ಪರಿಚಯಂ ಕುರ್ಯಾತ್ ಶಸ್ತ್ರಾಣಾಂ ಗ್ರಹಣೇಸದಾ॥೧೮॥ (ಸು. ಸೂ. ೮ ೮)

ಪ್ರಯೋಗಜ್ಞ ವೈದ್ಯನಿಗೆ ಸಿದ್ಧಿ(ಸಫಲತೆ)ಯುಸದಾ ಆಗುತ್ತಿರುತ್ತದೆ. ಆದ್ದರಿಂದ ಶಸ್ತ್ರಗಳನ್ನು ಹಿಡಿಯುವದರ ಅಥವಾ ಪ್ರಯೋಗಮಾಡುವದರಲ್ಲಿ ನಿತ್ಯ ಪರಿಚಯವನ್ನು ಹೊಂದಬೇಕು.

## ಪ್ರಶ್ನಸೂಚೀ ( Questions )

೧) ಶಸ್ತ್ರಗಳೆಂದರೇನು ? ಅವುಗಳ ಭೇದಗಳೆಷ್ಟು ? ಯಾವದಾದರೂ ಎರಡು ಶಸ್ತ್ರಗಳನ್ನು ಪ್ರಯೋಗ ಪೂರ್ವಕವಾಗಿ ವರ್ಣಿಸಿರಿ.

೨) ವ್ರೀಹಿಮುಖ ಯಂತ್ರವು ಹೇಗೆ ಮತ್ತು ಅದನ್ನು ಎಲ್ಲಿ ಉಪಯೋಗಿಸ ತಕ್ಕದು? ಅದರ ಆಕೃತಿಯನ್ನು ಚಿತ್ರದಲ್ಲಿ ರಚಿಸಿರಿ.

೩) ಏಷಣೀ ಎಂಬುದು ಯಾವಕಾರಣದ (ಕೆಲಸದ) ದೆಶೆಯಿಂದ ಇದೆ ? ಅದರ ಕಾರಣಗಳನ್ನು ಹೇಳಿರಿ.

೪) ಸೂಜಿಗಳು ಎಷ್ಟು ವಿಧ? ಅವುಗಳನ್ನು ಹೇಗೆ ಮತ್ತು ಎಲ್ಲಿ ಉಪಯೋಗಿಸತಕ್ಕದು?

೫ ವೃದ್ಧಿ ಪತ್ರ- ನಖಶಸ್ತ್ರ- ಕರಪತ್ರ- ಶರಾರೀಮುಖ-ಮುದ್ರಿಕಾ-ಬಡಿಶ- ದಂತಶಂಕು- ಕುಠಾರಿಕಾ ಈ ಶಸ್ತ್ರಗಳ ಭಾಷಾ ನಾಮಗಳನ್ನೂ, ಭೇದಗಳನ್ನೂ, ಪ್ರಯೋಗವಿಧಿ, ಮತ್ತು ರೂಪವನ್ನು ಪ್ರಕಟಿಸಿರಿ.

೬ ಮಂಡಲಾಗ್ರದ ಪ್ರಯೋಗ ಪ್ರಕಾರವನ್ನು ಚಿತ್ರ ಪೂರ್ವಕವಾಗಿ ಪ್ರದರ್ಶಿಸಿರಿ.

೭ ತ್ರಿಕೂರ್ಚಕ—ಖಜ—ಕುಶಪತ್ರಗಳ ಆಕೃತಿ ಮತ್ತು ಪ್ರಯೋಜನ ಮತ್ತು ಗ್ರಹಣವಿಧಿಯನ್ನೂ ಬರೆಯಿರಿ.

೮ ಅನುಶಸ್ತ್ರಗಳ ಅರ್ಥವೇನು? ಯಾವದಾದರೂ ೫ ಅನುಶಸ್ತ್ರಗಳ ನಾಮಗಳನ್ನು ಕೊಟ್ಟು ಪ್ರಯೋಗವಿಧಿಯನ್ನು ವಿಶದಿಸಿರಿ.

೯ ಶಸ್ತ್ರಗಳ ದೋಷಗಳೇನು ? ಶಸ್ತ್ರ ಸಂಪತ್ತನ್ನು ವರ್ಣಿಸಿರಿ.

೧೦ ಪಾಯನಾ [ಪಾನ] ಅಂದರೇನು ? ಎಷ್ಟು ವಿಧವಾಗಿದೆ ? ಅದರ ಪ್ರಯೋಜನೆಯನ್ನೂ ವಿಶದಪಡಿಸಿರಿ.

೧೧ ನಿಶಾನೀ ಅಂದರೇನು? ಧಾರಾ ಸ್ಥಾಪನವನ್ನು ಹೇಗೆ ಮಾಡ ಶಕ್ಕದು ?

೧೨ ಶಸ್ತ್ರಗಳ ಕೆಲಸವೇನು? ಮತ್ತು ಎಷ್ಟು ವಿಧ? ಯಾವ ಕೆಲಸದಲ್ಲಿ ಯಾವ ಶಸ್ತ್ರಗಳನ್ನು ಪಯೋಗಿಸಬೇಕೆಂಬುದನ್ನು ಚನ್ನಾಗಿ ವರ್ಣಿಸಿರಿ. ಅವುಗಳ ಗ್ರಹಣವಿಧಿಯನ್ನೂ ಅಲ್ಲಲ್ಲಿ ನಿರ್ದೇಶಪಡಿಸಿರಿ.

ಇಲ್ಲಿಗೆ ಯಂತ್ರಶಸ್ತ್ರ ಪರಿಚಯದಲ್ಲಿ ಶಸ್ತ್ರಪ್ರಕರಣವೆಂಬ ಎರಡನೇ ಅಧ್ಯಾಯವು [ಯಥಾ] ಬುಧ್ಯನುಸಾರವಾಗಿ ಮುಗಿದುದು.

॥ ಶ್ರೀ ಧನ್ವಂತರಯೇಽರ್ಪಣಮಸ್ತು ॥



# ೩ನೇ ಅಧ್ಯಾಯವು
# ಮಿ ಶ್ರಿ ತ ಪ್ರ ಕ ರ ಣ ವು
## Miscellaneous Instruments

ಯಾವ ಯಂತ್ರ ಅಥವಾ ಶಸ್ತ್ರಗಳನ್ನು ಹಿಂದಿನ ಎರಡು ಅಧ್ಯಾಯಗಳಲ್ಲಿ ಕೊಟ್ಟಿರುವದಿಲ್ಲವೋ ಅವುಗಳನ್ನು ಈಗ ಈ ಅಧ್ಯಾಯದಲ್ಲಿ ಕೊಡಲಾಗುತ್ತಿದೆ.

೧) ಶೃಂಗಯಂತ್ರ (Horn). ಶೃಂಗ (ಕೋಡು) ದ ಪ್ರಯೋಗವು ದುಷ್ಟವಾತ, ವಿಷ, ದುಷ್ಟ ರಕ್ತ, ದುಷ್ಟಸ್ತನ್ಯಾದಿಗಳ ಚೂಷಣಾರ್ಥವಾಗಿ ಮಾಡಲಾಗುತ್ತಿದೆ.

ಸು ಸೂ. ಅ ೧೩ ರಲ್ಲಿ ಶೃಂಗದ ವರ್ಣನೆಯನ್ನು ಕೆಳಗೆ ನೋಡಿರಿ. "ಉಷ್ಣಂ ಸಮಧುರಂ ಸ್ನಿಗ್ಧ ಗವಾಂಶೃಂಗಂ ಪ್ರಕೀರ್ತಿತಮ್। ತಸ್ಮಾದ್ವಾತೋಪಸೃಷ್ಟೇತು ಹಿತಂ ತದವಸೇಚನಮ್ ॥೫॥ ಕೋಡು ಇಲ್ಲಿ ಆಕಳದ್ದು ಇರತಕ್ಕುದು. †

ಪ್ರಯೋಗವು— "ತತ್ರ ಪ್ರಚ್ಛಿತೇ ತನುವಸ್ತ್ರ ವಸ್ತ್ರಪಟಲಾವನದ್ಧೇನ ಶೃಂಗೇಣ ಶೋಣಿತಮವಸೇಚಯೇತ್ ಆಚೂಷಣಾತ್ "॥ (ಸುಶ್ರುತ) ಶುಭ್ರವಾದ ಮತ್ತು ತೆಳ್ಳನ್ನ ವಸ್ತ್ರದಿಂದ ಶೃಂಗದ ಮುಖವನ್ನು ಕಟ್ಟಿ ಅದರ ರಕ್ತಾವಸೇಚನಾರ್ಥವಾಗಿ ಪ್ರಯೋಗಮಾಡತಕ್ಕುದು. ದುಷ್ಟಸ್ತನ್ಯ ಚೂಷಣಾರ್ಥವಾಗಿ ಪಚ್ಚ ಹಚ್ಚುವ ಅವಶ್ಯಕತೆಯಿಲ್ಲ. ತೆಳ್ಳನ್ನ ವಸ್ತ್ರದ ಪ್ರಯೋಜನವು ಶೃಂಗದ ಒಳಗಿನ ವಾಯುವನ್ನು ತನ್ನ ಮುಖದಲ್ಲಿ ಎಳೆಯುವದು ಮತ್ತು ಸ್ವರಕ್ಷಾರ್ಥವಾಗಿದೆ. ಅರ್ಥಾತ್ ದುಷ್ಟ ರಕ್ತಾದಿಗಳು ಮುಖದಲ್ಲಿ ಹೋಗಬಾರದು. ಪಚ್ಚವನ್ನು ಮಾಡದ ಹೊರತು ರಕ್ತವು ಹೊರಡಲಿಕ್ಕಿಲ್ಲಾ. ಸ್ತನ್ಯವಂತೂ ಚೂಚುಕ ಛಿದ್ರದಿಂದ ಬಂದೇಬರುವದು. ಶೃಂಗವು ಒಂದು ದ್ವಿಮುಖೀ ನಾಡೀ ಯಂತ್ರವಿದೆ.

---

† "ತ್ರ್ಯಂಗುಲಾಸ್ಯಂ ಭವೇಚ್ಛೃಂಗಂ ಚೂಷಣೇ ಅಷ್ಟಾದಶಾಂಗುಲಮ್। ಅಗ್ರೇಸಿದ್ಧಾರ್ಥಕಚ್ಛಿದ್ರಂ ಸನದ್ಧಂ ಚೂಚುಕಾಕೃತಿ"॥೨೪॥ [ಅ. ಹೃ. ಸೂ. ೨೫] ಶೃಂಗದಮುಖವು ೩ ಅಂಗುಲ ಮತ್ತು ಉದ್ದಳತೆಯು

೨) ಅಲಾಬುಯಂತ್ರ— ಅಲಾಬು ಎಂದು ಈಸಕುಂಬಳಕಾಯಿ ಅಥವಾ ಕುಂಬಳ [Bottle gourd] ಕ್ಕೆ ಎನ್ನುತ್ತಾರೆ. ಸುಪಕ್ವ ಫಲವನ್ನು (ಕಾಯಿಯನ್ನು) ಒಣಗಿಸಿ ಮತ್ತು ಅದರ ಮುಖವನ್ನು ಕತ್ತರಿಸಿ ಅಲಾಬು ಯಂತ್ರವನ್ನು ಮಾಡಲಾಗುತ್ತಿದೆ. ಇದು ಏಕಮುಖೀ ನಾಡೀ ಯಂತ್ರವಿದೆ. "ಅಲಾಬು ಕಟುಕಂ ರೂಕ್ಷಂ ತೀಕ್ಷ್ಣಂ ಚ ಪರಿಕೀರ್ತಿತಮ್। ತಸ್ಮಾತ್ ಶ್ಲೇಷ್ಮೋಪ ಸೃಷ್ಟೇತುಹಿತಂ ತದವಸೇಚನೇ" ॥೭॥ (ಸು. ಸೂ. ಅ. ೧೩). ಅಲಾಬು ಕಟುರೂಕ್ಷ ಮತ್ತು ತೀಕ್ಷ್ಣವಾಗಿರುವದರಿಂದ ಶ್ಲೇಷ್ಮ ದುಷ್ಟ ರಕ್ತದ ಅವಸೇಚನಾರ್ಥವಾಗಿ ಕೆಲಸಕ್ಕೆ ಬರುತ್ತದೆ.

ಪ್ರಯೋಗ— "ಪ್ರಚ್ಛಿತೇ ಶೋಣಿತಮವಸೇಚಯೇತ್ ಸಾಂತರ್ದೀಪಯಾಽಲಾಬ್ವಾ" ॥೮॥ (ಸು. ಸೂ. ಅ. ೧೩) ಅಲಾಬುವನ್ನೂ ಪಚ್ಛ ಹಚ್ಚಿ ಪ್ರಯೋಗ ಮಾಡಲಾಗುತ್ತಿದೆ. ಆದರೆ ಅದರಲ್ಲಿ ಕಪ್ಪುರ, ಸ್ಪಿರಿಟ, ತೃಣ ಇತ್ಯಾದಿಗಳನ್ನು ಸುಟ್ಟು ವಾಯುವನ್ನು ಮೊದಲು ಹೊರಗೆ ಹಾಕತಕ್ಕದು. ರಿಕ್ತಸ್ಥಾನ (Vacuum)ದ ಉತ್ಪತ್ತಿಯಿಂದ ದುಷ್ಟ ರಕ್ತವು ಈಸಕುಂಬಳಕಾಯಿ † ಯಲ್ಲಿ ತುಂಬುತ್ತದೆ.

೩) ಕಾಚಶರಾವ— (Cupping glass). ಇದು ಅಲಾಬುವಿನ ಆಧುನಿಕ ರೂಪಾಂತರವಿದೆ. ಇದರಲ್ಲಿ ಸ್ವಲ್ಪ ಮದ್ಯಸಾರವನ್ನು Spirit ಮಗ್ಗಲಿಗೆ ಹಚ್ಚಿ ಅದನ್ನು ಕಾಯಿಸಲಾಗುತ್ತದೆ. ಜ್ವಲನವು ಮಂದವಾದ ಮೇಲೆ ಅದನ್ನು ಪ್ರಚ್ಛಿತ ಸ್ಥಾನದಮೇಲೆ ಹಚ್ಚಲಾಗುತ್ತಿದೆ. ಅಗ್ನಿಯು ತತ್ಕ್ಷಣವೇ ನಂದಿ ಹೋಗುತ್ತದೆ ಮತ್ತು ರಕ್ತವು ಬರುತ್ತದೆ ಇದಕ್ಕೆ ಈಗ

---

೧೮ ಅಂಗುಲವಾಗಿರುತ್ತದೆ. ಮುಂದಿನ ಸಿರೋಭಾಗವು ಸರ್ಷಪ ಸಮಾನ (ಸಾಸಿವೆಕಾಳಿನಷ್ಟು) ಸಣ್ಣದು ಮತ್ತು ಚೂಚುಕಾಕಾರ(Nipple-shaped) ಮತ್ತು ಸುನದ್ಧ (ತನುವಸ್ತ್ರಬದ್ಧ-ತೆಳ್ಳನ್ನ ಬಟ್ಟೆಯಿಂದ ಕಟ್ಟಿದ್ದು) ಆಗಿರತಕ್ಕದು. "ಚೂಚುಕಸ್ಯ ಸ್ತ್ರೀಕುಚಾಗ್ರಸ್ಯಾಕೃತಿರಾಕಾರೋ ಯಸ್ಯ ತದೇವಮ್" (ಇತಿ ಅರುಣದತ್ತಃ)

† "ಸ್ಯಾದ್ ದ್ವಾದಶಾಂಗುಲೋಽಲಾಬುರ್ನಾಹೇತ್ವಷ್ಟಾದಶಾಂಗುಲಃ। ಚತುಸ್ತ್ರ್ಯಂಗುಲವೃತ್ತಾಸ್ಯೋದೀಪ್ತೋಽಂತಃ ಶ್ಲೇಷ್ಮ ರಕ್ತಹೃತ್ ॥೨೫॥ (ಅ. ಹೃ. ಸೂ. ಅ. ೨೫) ಅಲಾಬುಯಂತ್ರವು ೧೨ ಅಂಗುಲಉದ್ದ,

ಪ್ರಾಯಃ ಶೂಲಶಮ ನಾರ್ಥವಾಗಿ ಮಾಂಸಲ ಸ್ಥಾನದ ಮೇಲೆ ಹಚ್ಚುತ್ತಾರೆ. ಕಪ್ಪಿಂಗ ಗ್ಲಾಸು ೩ ಪ್ರಮಾಣ (ಅಲ್ಪ, ಮಧ್ಯಮ, ಬೃಹತ್) ಗಳಲ್ಲಿ ದೊರೆಯುತ್ತವೆ.

೪) ಸ್ತನ್ಯಚೂಷಕ ಯಂತ್ರ ( Breast pump ). ದುಷ್ಟಸ್ತನ್ಯ ಚೂಷಣಾರ್ಥವಾಗಿ ಆಧುನಿಕ ಯಂತ್ರವಿದು. ಇದಕ್ಕೆ ಬ್ರೆಸ್ಟಪಂಪ ಎನ್ನುತ್ತಾರೆ.

ಇದರಲ್ಲಿ ಮೂರು ಭಾಗಗಳಿರುತ್ತವೆ. ೧) ಕಾಚ ಶರಾವ, ಇದು ಚೂಚುಕ ಅಥವಾ ಸ್ತನಾಗ್ರದ ಮೇಲೆ ಹಚ್ಚಲಾಗುತ್ತಿದೆ. ೨) ರಬ್ಬರ ಕೋಶವು (Rubber bulb), ಅದನ್ನು ಒತ್ತುವವದಿಂದ ವಾಯುವು ಹೊರಗೆ ಬರುತ್ತದೆ. ಮತ್ತು ೩) ಗ್ರಾಹಕ ಕೋಷ್ಠ (Receiver), ಇದರಲ್ಲಿ ಸ್ತನ್ಯವು ಚೂಚುಕದ ಛಿದ್ರಗಳಿಂದ ಹೊರಟು ಏಕತ್ರವಾಗುತ್ತದೆ. ಬ್ರೆಸ್ಟ ಪಂಪು ೨ಔಂಸು ಮತ್ತು ೪ ಔಂಸ ಎಂದು ಎರಡು ಪ್ರಕಾರವಾಗಿರುತ್ತವೆ. ಅಲಾಬು, ಘಟೀ, ಕಾಚಶರಾವ ಮತ್ತು ಸ್ತನ್ಯ ಚೂಷಕ ಇವುಗಳೆಲ್ಲ ಏಕಮುಖೀ ನಾಡೀಯಂತ್ರಗಳಿವೆ. ಮತ್ತು ದ್ವಿಮುಖೀ ಶೃಂಗಗಳಿವೆ. ಇವುಗಳ ಸಿದ್ಧಾಂತವು ಒಂದೇ ಇದೆ. ಅರ್ಥಾತ್ ವಾಯುವನ್ನು ಹೊರಡಿಸಿ ರಕ್ತಾದಿಗಳ ಅವಸೇಚನೆಯನ್ನು ಮಾಡುವದಿದೆ.

---

ಪರಿಣಾಹ [Circumference] ದಲ್ಲಿ ೧೮ ಅಂಗುಲ, ಮುಖವು ೩-೪ ಅಂಗುಲ ಅಗಲ ಮತ್ತು ದುಂಡಗಿದೆ. ಅದನ್ನು ಅಂತರ್ದೀಪ್ತ ಮಾಡಿ ಶ್ಲೇಷ್ಮ ದುಷ್ಟರಕ್ತವನ್ನು ತೆಗೆಯತಕ್ಕದ್ದು. "ಅಂತರ್ಮಧ್ಯೇ ದೀಪ್ತೋ ಜ್ವಲಿತಃ ಪಿಚುಭೂರ್ಜಾದಿ ಗರ್ಭ ಇತ್ಯರ್ಥಃ" (ಅರುಣದತ್ತಃ) ಅಲಾಬುದ ಒಳಗೆ ಪಿಚು (ಅರಳೆಯನ್ನು) ಭೂರ್ಜಪತ್ರಾದಿಗಳನ್ನು ಹಾಕಿ ಕಾಯಿಸ ತಕ್ಕುದು. ಅರಳೆಯನ್ನು ಮದ್ಯಸಾರ [Spirit] ದಿಂದ ತೋಯಿಸಿಯೂ ಕಾಯಿಸಬಹುದು. ವಾಗ್ಭಟರು ಪ್ರಸಂಗ ವಶದಿಂದ ಘಟೀಯಂತ್ರದ ಉಲ್ಲೇಖವನ್ನು ಮಾಡಿದ್ದಾರೆ "ತದ್ವದ್ ಘಟೀಹಿತಾಗುಲ್ಮ — ವಿಲಯೋನ್ನಮನೇಚಸಾ" ॥೨೬॥ ಘಟೀ (ಸಂಣ ಗಡಿಯಾರ) ಯನ್ನು ಅಲಾಬುವಿನಂತೆ ಗುಲ್ಮದ ಲೀನ ಮಾಡಲಿಕ್ಕೆ ಅಥವಾ ಉನ್ನಮನ ಮಾಡಲಿಕ್ಕೆ ಉಪಯೋಗಿಸಲು ಬರುತ್ತದೆ. ಸಿಂಧು ದೇಶದಲ್ಲಿ ಸ್ತ್ರೀಯರ ವಾತ ಗುಲ್ಮದಲ್ಲಿ ಘಟೀಯಂತ್ರದ ಪ್ರಯೋಗವನ್ನು ಮಾಡುತ್ತಾರೆಂಬುದು ತಿಳಿದು ಬಂದಿದೆ.

೫) ಅರ್ಶೋಯಂತ್ರ (Rectal speculum) ಇದರ ಪ್ರಯೋಗವು ಅರ್ಶ (Piles) ಮತ್ತು ಭಗಂದರ (Fistula) ದ ಪರೀಕ್ಷೆಮಾಡುವದು. ಹಾಗೂ ಕ್ಷಾರಾದಿಗಳನ್ನು ಅರ್ಶದಮೇಲೆ ಪಾತನವಮಾಡುವದಿದೆ. ಇದರ ಹೊರತಾಗಿ ಇದರಿಂದ ಗುದದಲ್ಲಿ ವ್ರಣ, ವಿದ್ರಧಿ, ಶೋಥಾದಿಗಳ ಪರೀಕ್ಷೆಯನ್ನೂ ಮಾಡಲಾಗುತ್ತಿದೆ. ಆದ್ದರಿಂದಲೇ ಈ ಯಂತ್ರಕ್ಕೆ ಈಗಿನ ಕಾಲದಲ್ಲಿ ರೈಕ್ಟಲ್ ಸ್ಪೈಕ್ಯುಲಮ (ಗುದದರ್ಶಕ) ಎಂದೆನ್ನುತ್ತಾರೆ. ಇದರ ಒಂದು ಶಿರೋಭಾಗವು ತೆರೆವದ್ದಿರುತ್ತದೆ. ಅದರ ಹೊರಗೆ ಕರ್ಣಿಕೆಯಿರುತ್ತದೆ. ಕರ್ಣಿಕೆಯು ಯಂತ್ರವು ಸಂಪೂರ್ಣ ಗುದದಲ್ಲಿ ಹೋಗದಂತೆ ತಡೆಯುತ್ತದೆ. ಎರಡನೇ ಶಿರವು ಮುಚ್ಚಿದ್ದು (Blind) ಇರುತ್ತದೆ. ಅದರ ಸಮೀಪ ಪಾರ್ಶ್ವದಲ್ಲಿ ಒಂದು ಉದ್ದವಾದ ಅಥವಾ ಗೋಲಾಕಾರದ ಛಿದ್ರವಿರುತ್ತದೆ. ಅರ್ಶೋಯಂತ್ರದ ಪ್ರಯೋಗಕ್ಕಿಂತ ಮೊದಲು ರೋಗಿಗೆ ಬಸ್ತಿಯನ್ನು ಕೊಟ್ಟು ಕೋಷ್ಠವನ್ನು ಶುದ್ಧಮಾಡಿಕೊಳ್ಳತಕ್ಕದು ಮತ್ತು (ಶಸ್ತ್ರಕರ್ಮವನ್ನು ಮಾಡುವದಾಗಿದ್ದರೆ) ತೈಲಾದಿ ಯಾವದಾದರೂ ಸ್ನೇಹದಿಂದ ಯಂತ್ರವನ್ನು ಸ್ನಿಗ್ಧಮಾಡಿ ಸಾವಕಾಶವಾಗಿ ಗುದದಲ್ಲಿ ಪ್ರವೇಶ ಮಾಡಿಸತಕ್ಕದು. ಅದನ್ನು ತಿರುಗಿಸುವದರಿಂದ ಗುದಕೀಲ (ಗುಳ್ಳೆ- ಕೀಲ) ಗಳು ಛಿದ್ರದಲ್ಲಿ ಸಿಕ್ಕುವದರಿಂದ ಅಗ್ಗೆ ಅವುಗಳ ಮೇಲೆ ಕ್ಷಾರ ಅಥವಾ ಅಗ್ನಿಯ ಪ್ರಯೋಗವು ಸುಗಮತೆಯಿಂದ ಆಗಿಹೋಗುತ್ತದೆ. ಸು. ಚಿ. ಅ. ೬ ರಲ್ಲಿ ಇದರ ವರ್ಣನೆಯು ಹೀಗಿದೆ— "ಅತ ಊರ್ಧ್ವಂ ಯಂತ್ರ ಪ್ರಮಾಣಮುಪದೇಕ್ಷ್ಯಾಮಃ ತತ್ರ ಯಂತ್ರಂ ಲೌಹಂ ದಾಂತಂ ಶಾರ್ಙ್ಗಂವಾರ್ಕ್ಷಂ ವಾಗೋಸ್ತನಾಕಾರವ್" ಇತ್ಯಾದಿ ಪಾಠವು ದೊರೆಯುತ್ತಿದೆ. ಅದನ್ನು ನೋಡಿಕೊಂಡು ತಿಳಿದುಕೊಳ್ಳತಕ್ಕದು. ಇದಾದರೂ ದ್ವಿಛಿದ್ರ ನಾಡಿಯಂತ್ರವಿದೆ. ಸ್ತ್ರೀ ಪುರುಷರ ದೆಶೆಯಿಂದ ಬೇರೆ ಬೇರೆ ಪ್ರಮಾಣದ ಯಂತ್ರಗಳಿರುತ್ತವೆ. ಮತ್ತು ಲೋಹ, ಹಸ್ತಿದಂತ ಶೃಂಗ, ಅಥವಾ ಕಾಷ್ಠದಿಂದ ಮಾಡಲಾಗುತ್ತಿದೆ §

§ ಸುಶ್ರುತರ ಸದೃಶವಾಗಿಯೇ ವಾಗ್ಭಟರ ಪಾಠವಿದೆ. ಹೇಗೆಂದರೆ "ಅರ್ಶಸಾಂಗೋಸ್ತನಾಕಾರಂ ಯಂತ್ರಕಂ ಚತುರಂಗುಲಮ್— ಇತ್ಯಾದಿ (ಅ. ಹೃ. ಸೂ. ಅ. ೩೦) ಇದರ ಸಂಗಡನೇ ವಾಗ್ಭಟರು ಶಮ್ಯಾಖ್ಯ

೬] ಯೋನಿವ್ರಣೇಕ್ಷಣ ಯಂತ್ರವು (Vaginal speculum).
ಈ ಅಭೂತಪೂರ್ವ ನಾಡೀಯಂತ್ರವನ್ನು ವಾಗ್ಭಟರೇ ಸರ್ವ ಪ್ರಥಮವಾಗಿ ರಚಿಸಿದರು. ಮತ್ತು ವರ್ಣನೆಯನ್ನು ಮಾಡಿದ್ದಾರೆ– ಹೇಗೆಂದರೆ— "ಯೋನಿ ವ್ರಣೇಕ್ಷಣಂ ಮಧ್ಯೇ ಸುಷಿರಂ ಷೋಡಶಾಂಗುಲಂ| ಮುದ್ರಾ ಬದ್ಧಂ ಚತುರ್ಭಿತ್ತಮಂಭೋಜಮುಕುಲಾನನಮ್ | ಚತುಃಶಲಾಕ ಮೂಕ್ರಾಂತಂ ಮೂಲೇ ತದ್ವಿಕಸೇನ್ಮುಖೆ" ||೩೧|| (ಅ. ಹೃ. ಸೂ. ಅ. ೨೫) ಯೋನಿವ್ರಣೇಕ್ಷಣ ಯಂತ್ರವು ಮಧ್ಯದಲ್ಲಿ ರಿಕ್ತ ಅಥವಾ ಪೊಳ್ಳು, ೧೬ ಅಂಗುಲ ಉದ್ದ, ಮುದ್ರಾ (ಚಕ್ರ Ring) ದಿಂದ ಕಟ್ಟಿದ್ದು, ಚತುರ್ಭಿತ್ತ ಅರ್ಥಾತ್ ೪ ಭಿತ್ತಿಗಳು (ಪತ್ರ– ಎಲೆ) ಉಳ್ಳದ್ದೂ– Four bladed ಮಂಭೋಜ (ಕಮಲ) ದ ಮುಕುಲ (ಮೊಗ್ಗೆ) ದ ಸಮಾನವುಳ್ಳದ್ದೂ, ಅರ್ಥಾತ್ ಯಾವ ಪ್ರಕಾರವಾಗಿ ಕಮಲ ಪುಷ್ಪದ ದಲಗಳು (Petals) ಕೆಳಗಿನಿಂದ ಜೋಡಿಸಿದಂಥವೂ ಮತ್ತು ಮೇಲ್ಗಡೆಗೆ ತೆರೆದವೂ. ಇರುತ್ತವೋ ಇದೇ ಪ್ರಕಾರವಾಗಿ ಈ ಯಂತ್ರ ಫಲಕೆಗಳೂ (Blades) ಒಂದುಕಡೆಗೆ ಮುದ್ರಾಭದ್ಧವಾಗಿಯೂ ಮತ್ತು ಎರಡನೇ ಕಡೆಗೆ ತೆರೆದವೂ ಇರುತ್ತವೆ. ಇದರ ಮೂಲದಲ್ಲಿ ೪ ಶಲಾಕೆಗಳಿರುತ್ತವೆ. ಅವುಗಳ ಸಂಬಂಧವು ಭಿತ್ತಿ (ಫಲಕೆಪತ್ರ) ಗಳಿಂದ (Blades) ಇರುತ್ತದೆ. ಅದನ್ನು ಒತ್ತುವದರಿಂದ ಯಂತ್ರದ ಮುಖವು ತೆರೆಯುತ್ತದೆ. ಇದು ಎಂಥ ಸುಂದರ ವರ್ಣನೆಯಿದೆ. ಈಗಿನಕಾಲದಲ್ಲಿ ಯಂತ್ರದಮೂಲದಲ್ಲಿ ತಿರುಪು (Screws) ಹತ್ತಿಕೊಂಡಿರುತ್ತವೆ. ಇದರಿಂದ ಫಲಕೆಗಳು ತೆರೆಯುವದೂ ಮುಚ್ಚುವದೂ ಆಗುತ್ತದೆ.

---

ಯಂತ್ರದ ಉಲ್ಲೇಖವನ್ನು ಮಾಡಿದ್ದಾರೆ. ಹೇಗೆ— ‡ 'ಶಮ್ಯಾಖ್ಯಂತಾದೃಗಚ್ಛಿದ್ರಂ ಯಂತ್ರಮರ್ಶಃ ಪ್ರಪೀಡನಮ್||" ಶಮೀಯಂತ್ರವು ಅರ್ಶೋಯಂತ್ರದಂತಿದೆ. ಆದರೆ ಅಚ್ಛಿದ್ರ (ಛಿದ್ರರಹಿತ) ತಿಳಿಯತಕ್ಕದ್ದು. ಇದರ ಪ್ರಯೋಜನೆಯು ಗುಳ್ಳೆಗಳ ಪೀಡನ [Press] ಮಾಡುವದಿದೆ. ಭಗಂದರ ಯಂತ್ರವು ಅರ್ಶೋಯಂತ್ರದಿಂದ ಸ್ವಲ್ಪ ಭಿನ್ನವಾಗಿದೆ. ಹೇಗೆ— 'ಸರ್ವಥಾಪನಯೇದೋಷ್ಠಂ ಛಿದ್ರಾದೂರ್ಧ್ವಂ ಭಗಂದರೆ ||೧೮|| (ವಾ. ಸೂ) ಅರ್ಥ— ಭಗಂದರ ಯಂತ್ರದಲ್ಲಿ ಛಿದ್ರದ ಮೇಲುಗಡೆಗಿರುವ ಕೋಷ್ಠ (ಕರ್ಣಿಕಾ) ವನ್ನು ಸರಿಸಬೇಕು.

ಈ ಯಂತ್ರದ ಬೃಹದ್ ಚಿತ್ರವನ್ನು ಪುಸ್ತಕದ ಕೊನೆಯಲ್ಲಿ ತೋರಿಸಲಾಗಿದೆ. ಅದರಿಂದ ಇದರ ಆಕೃತಿಯು ತಿಳಿಯಲ್ಪಡುವದು. ಇದಕ್ಕೆ ಯೋನಿವೀಕ್ಷಣಯಂತ್ರ (ವೈಜಿನಲ್ ಸ್ಪೆಕ್ಯುಲಮ್ Vaginal Speculum) ಎನ್ನುತ್ತಾರೆ. ಇದರ ಆನನ (ಮುಖ- ಅಗ್ರ) ವನ್ನು (Vagina) ಯೋನಿಯಲ್ಲಿ ಇಟ್ಟು ಮುದ್ರಾದ ಸಂಗಡವಿದ್ದ ಹಸ್ತಗ್ರಹವನ್ನು ಯಾವುದಕ್ಕೆ ವಾಗ್ಭಟಕಾರರು ಚತುಃ ಶಲಾಕಾಮೂಲವೆಂದಿದ್ದಾರೋ ಮತ್ತು ಈ ಕಾಲದಲ್ಲಿ ಇವಕ್ಕೆ Folding handle ಎನ್ನುತ್ತಾರೋ ಅದನ್ನು ಹತ್ತಿಕ್ಕುವದರಿಂದ ಯೋನಿಯ ಮುಖವು ಅಗಲವಾಗಿ ಒಳಗಿನ ರಚನೆ, ಗರ್ಭಾಶಯ ಮುಖ (Os) * ಹಾಗೂ ಗ್ರೀವಾ (Cervix) ಇತ್ಯಾದಿಗಳು ಕಾಣಿಸಿಕೊಳ್ಳುತ್ತವೆ. ಇದೇ ಈ ಯಂತ್ರದ ಸಂಕ್ಷಿಪ್ತ ಆಶಯವಿದೆ. ಪಾಶ್ಚಿಮಾತ್ಯ ಡಾಕ್ಟರ ಜನರು ನಮಗೆ ಈ ಮಾತನ್ನು ತೋರಿಸಬಹುದೇ ? ಏನೆಂದರೆ— ಅವರ ಯಾವದಾದರೂ ಗ್ರಂಥವು ಯಾವದು ೧೫೦೦ ವರ್ಷಗಳಿಗಿಂತಲೂ ಪೂರ್ವಿಕ ವಾಗಿದ್ದು, ಮತ್ತು ಅದರಲ್ಲಿ ಯೋನಿವೀಕ್ಷಣಯಂತ್ರದ ವರ್ಣನೆಯು ಇರುವದು. ಅಲ್ಲದೇ ಆಂತ್ರದ ವರ್ಣನೆಯು? ಅಷ್ಟಾಂಗಹೃದಯವು ೧೫೦೦ ವರ್ಷಕ್ಕಿಂತಲೂ ಪ್ರಾಚೀನ ಗ್ರಂಥವಿದೆ.

ಆಧುನಿಕ ಶಲ್ಯ ಶಾಸ್ತ್ರದಲ್ಲಿ ಸ್ತ್ರೀಯರ ರೋಗಗಳ ನಿಧಾನ, ಹಾಗೂ ಶಸ್ತ್ರ ಕರ್ಮದ ದೆಶೆಯಿಂಧ ಅನೇಕ ಯಂತ್ರ ಶಸ್ತ್ರಗಳು ದೊರೆಯುತ್ತವೆ. ಅವುಗಳಲ್ಲಿ ಬಹುತರವಾಗಿ Labour Instruments (ಪ್ರಸವಯಂತ್ರಗಳಿವೆ. ಏತತ್ಪ್ರಯೋಜನೆಗಾಗಿ ಪತಿಯಾಲಾ ನಿವಾಸಿಗಳಾದ ಶ್ರೀ ಪಂ ಕಾಂತಿನಾರಾಯಣರ ಪುಸ್ತಕ 'ಪ್ರಸವ ವಿಜ್ಞಾನ' ಸಚಿತ್ರವನ್ನು ನೋಡತಕ್ಕುದಾಗಿದೆ ವೈದ್ಯ ಜನರ ದೆಶೆಯಿಂದ ಇದು (ಪ್ರಸವ ವಿಜ್ಞಾನ) ಗ್ರಂಥವು ಬಹಳ ಉಪಯೋಗವುಳ್ಳ ಗ್ರಂಥವಾಗಿದೆ.

ನಾಸಾವೀಕ್ಷಣಯಂತ್ರ (Nasal speculum) ಇದರ ಅಗ್ರಭಾಗವನ್ನು ನಾಸಾದಲ್ಲಿ ಹಾಕಿ ಹಸ್ತಗ್ರಹವನ್ನು ಹತ್ತಿಕ್ಕುವದರಿಂದ ಘ್ರಾಣವು ಅಗಲವಾಗುತ್ತದೆ. ಚಕ್ರ (ತಿರುಪಿ) ದ ಕ್ರಿಯೆಯ ದ್ವಾರಾ ಫಲಕೆಯು

* 'os' ಶಬ್ದವು ಸಂಸ್ಕೃತದ 'ಆಸ್ಯ' ಶಬ್ದದಿಂದಲೇ ಹೊರಟ ಶಬ್ದವಾಗಿದೆ.

ಸ್ಥಿರ ರೂಪದಿಂದ ತೆರೆದು ನಿಲ್ಲುತ್ತದೆ. ಈ ಯಂತ್ರದ ಪ್ರಯೋಗದಿಂದ ನಾಸಾ (ಮೂಗಿನ) ಆಭ್ಯಂತರಿಕ ರಚನೆಯು ದೃಷ್ಟಿ ಗೋಚರವಾಗುತ್ತದೆ. "Nasal speculum is used to widen the anterior nares by retracting the lateral and septal walls to examine the interior of the nose". ಇದಾದರೂ ರೋಗ ದರ್ಶನಾರ್ಥವಾಗಿ ನಾಡೀಯಂತ್ರಗಳಲ್ಲಿ ಸಮ್ಮಿಲಿತವಾಗುತ್ತಿದೆ.

ಉ) ಜಿಹ್ವಾ ಪೀಡಕ ಯಂತ್ರ (Tongue depressor.) ಇದು ಪಟ್ಟಿಯಂಥದು. ನಾಲಿಗೆಯನ್ನು ಹತ್ತಿಕ್ಕಿ ಕಂಠವನ್ನು ನೋಡಲಿಕ್ಕೆ ಪ್ರಯುಕ್ತವಾಗುತ್ತದೆ. ಇದಿಲ್ಲದಿದ್ದರೆ ಚಮಚೆಯಿಂದಲೂ ಕೆಲಸವನ್ನು ತೆಗೆದುಕೊಳ್ಳಲಾಗುತ್ತಿದೆ. ಇದನ್ನು ತಾಲಯಂತ್ರದಲ್ಲಿ ಗಣನೆ ಮಾಡಬಹುದಾಗಿದೆ.

೯ ಕರ್ಣದರ್ಶಕಯಂತ್ರ (Ear Speculum). ಇದೊಂದು ನಳಿಕೆಯಂತಿದೆ. ಅದು ಮುಂದುಗಡೆ ಹತ್ತೆಯಾಗಿಯೂ ಹಿಂದುಗಡೆ ಅಗಲವಾಗಿಯೂ ಇರುತ್ತದೆ. ಇದರ ಸಂಗಡ ಕೆಲವು ಸಾರೆ ವಿದ್ಯುತ್‌ಕೋಶ (Battery or cell) ವು ಹತ್ತಿರುತ್ತದೆ. ಅದರ ಪ್ರಕಾಶದಿಂದ ಕರ್ಣ (ಕಿವಿ) ದ ಅಭ್ಯಂತರ ರಚನೆಯು ಕರ್ಣಪಟಲ (Ear drum) ಇತ್ಯಾದಿಗಳೆಲ್ಲವೂ ಕಾಣಿಸಿಕೊಳ್ಳುತ್ತವೆ. ಇದಕ್ಕೆ ವಿದ್ಯುತ್ಕರ್ಣದರ್ಶ [Electric Auriscope] ಎಂದೂ ಎನ್ನುತ್ತಾರೆ. ವಿದ್ಯುತ್ತಿನ ಅಭಾವದಲ್ಲಿ ಸೂರ್ಯ ಪ್ರಕಾಶದಿಂದಲೂ ಕೆಲಸವನ್ನು ತೆಗೆದುಕೊಳ್ಳಲಾಗುತ್ತಿದೆ.

೧೦] ಕಂಠ ಶಲ್ಯಾವಲೋಕಿನೀ ನಾಡೀ ಯಂತ್ರ :— "ದಶಾಂಗುಲಾರ್ಧನಾಹಾಂತಃ ಕಂಠ ಶಲ್ಯಾವಲೋಕನೇ।" ಈ ಪ್ರಕಾರವಾಗಿ ವಾಗ್ಭಟರು ಅನೇಕ ನಾಡೀಯಂತ್ರ (ಆಮಯಾನಾಂಚ ದರ್ಶನೇ) ಗಳನ್ನು ವರ್ಣಿಸಿದ್ದಾರೆ. ಅಲ್ಲಿ ಪಾಠವನ್ನು ನೋಡಿ ತಿಳಿದುಕೊಳ್ಳತಕ್ಕದ್ದು. ಅವರು ಹೀಗೆ ಬರೆದಿದ್ದಾರೆ— "ನಾಡೀರೇವಂ ವಿಧಾಶ್ಚಾನ್ಯಾ ದೃಷ್ಟ್ವಂ ಶಲ್ಯಾನಿ ಕಾರಯೇತ್" ॥ ೧೪ ॥ ಈ ಪ್ರಕಾರವಾದ ಅನೇಕ ನಾಡೀಯಂತ್ರಗಳನ್ನು ಶಲ್ಯಗಳನ್ನು ನೋಡುವ ಸಲುವಾಗಿ ಮಾಡಿಸತಕ್ಕದ್ದು.

೧೧) ಧೂಮನೇತ್ರ [Inhaler] :— ಸು. ಚಿ. ಅ. ೪೦ ರಲ್ಲಿ ಇದರ ವರ್ಣನೆಯು ದೊರೆಯುತ್ತದೆ. ಯಥಾ:— "ಧೂಮನೇತ್ರಂ ತು

ಕನಿಷ್ಠಿಕಾ ಪರಿಣಾಹಮಗ್ರೆ ಕಲಾಯ ಮೂತ್ರಸ್ರೋತೋ ಮೂಲೇಂಗುಷ್ಠ ಪರಿಣಾಹಮಿತ್ಯಾದಿ| ” ಅಗ್ರಭಾಗದಲ್ಲಿ ಧೂಮದ್ರವ್ಯ, ಚಂಗಲಕೋಷ್ಠ, ಬಜೆ ಇತ್ಯಾದಿಗಳ ಚೂರ್ಣವನ್ನು ತುಂಬಿ ಅದನ್ನು ತಂಬಾಕುವಿನಂತೆ ಅಗ್ನಿ ಕೊಡುತ್ತಾರೆ. ಮತ್ತು ಮುಖದಿಂದ ಹೊಗೆಯನ್ನು ಒಳಗೆ ಎಳೆಯುತ್ತಾರೆ ಅಥವಾ Inhale ಮಾಡುತ್ತಾರೆ. ಇವರ ಪ್ರಯೋಗವು ತಮಕಶ್ವಾಸ, ಶ್ಲೇಷ್ಮ, ಕೆಮ್ಮಿನಲ್ಲಿ ಮಾಡಲಾಗುತ್ತಿದೆ. ಶಾರ್ಙ್ಗಧರ ಸಂಹಿತಾಕಾರರೂ ಧೂಮನಾಡಿಯ ವರ್ಣನೆಯನ್ನು ಉತ್ತರಖಂಡ ಅ ೯ ರಲ್ಲಿ ಮಾಡಿದ್ದಾರೆ. “ಧೂಮನಾಡೀ ಭವೇತ್ತತ್ರ ತ್ರಿಖಂಡಾ ಚ ತ್ರಿಪರ್ವಿಕಾ|” ಇತ್ಯಾದಿ. ಇದೇ ರೀತಿಯಾಗಿ ವಾಗ್ಭಟರೂ ಸಹ “ಬಸ್ತಿ ನೇತ್ರಸಮಂ ದ್ರವ್ಯಂ ತ್ರಿಕೋಶಂ ಕಾರಯೇದೃಜು | ಮೂಲಾಗ್ರೇಽಂಗುಷ್ಠಕೋಲಾಸ್ಥಿ ಪ್ರವೇಶಂ ಧೂಮ ನೇತ್ರಕಮ್ ||೮|| (ಅ. ಹೃ. ಸೂ. ಅ. ೨೧.) ಹೀಗೆ ಧೂಮನೇತ್ರದ ಉಲ್ಲೇಖವಿದೆ. ಇದರ ಮುಂದಿನ ಶಿರೋಭಾಗದಲ್ಲಿ ಧೂಮವರ್ತಿಯನ್ನು ಕೊಡಲಾಗುತ್ತಿದೆ. ಯಥಾ “ಧೂಮನೇತ್ರಾರ್ಪಿತಾಂ ಪಾತುಮಗ್ನಿಪ್ಲುಷ್ಟಾಂ ಪ್ರಯೋಜಯೇತ್”| (ಅ ಹೃ. ಸೂ. ಅ. ೨೧.) ಧೂಮನೇತ್ರದ ಮುಖವು ಅಗಲ ಮತ್ತು ಮೂಲವು ಸಣ್ಣದು ಇರಬೇಕು. ಈ ಕಾಲದ ಹುಕ್ಕಾ (ಗುಡಗುಡಿ) ಯೂ ಒಂದು ಧೂಮಯಂತ್ರವೇ ಇದೆ. ಮತ್ತು ಸಿಗರೇಟು ಧೂಮವರ್ತಿಯೆಂದು ತಿಳಿಯತಕ್ಕುದಾಗಿದೆ. (ಆದರೆ ಅದರಲ್ಲಿರತಕ್ಕದ್ರವ್ಯ [ತಂಬಾಕು] ವು ಅಹಿತವಾಗಿದೆ).

೧೨) ಉರೋವೀಕ್ಷಣ ಯಂತ್ರ ( Stethoscope ). ಇದು ಸುಪ್ರಸಿದ್ಧವಾದ ತ್ರಿಮುಖೀ ನಾಡೀಯಂತ್ರವು. ಹೃದಯ ಮತ್ತು ಪುಪ್ಪುಸದ ಪರೀಕ್ಷಾರ್ಥವಾಗಿ ಪ್ರಯುಕ್ತವಾಗಿದೆ. ಇದರಲ್ಲಿ ಮೂರು ಭಾಗಗಳಿವೆ. [೧] ಕರ್ಣಖಂಡಗಳೆರಡು [ Ear-Piece ] (೨) ನಳಿಕೆಗಳೆರಡು [Rubber-tubes] ಶಬ್ದವಾಹನಾರ್ಥವಾಗಿ ಮತ್ತು (೩) ವಕ್ಷೋಭಾಗ [Chest-Piece] ಹೃದಯ ಪರೀಕ್ಷಾರ್ಥವಾಗಿ. ಕಿವಿಗಳಲ್ಲಿ ಕರ್ಣಖಂಡವನ್ನು ಸುಯೋಜನ ಮಾಡಿ ವಕ್ಷೋಭಾಗವನ್ನು ಸ್ತನಾಗ್ರದಿಂದ ೧|| ಇಂಚು ಎಡೆಯ ಮಧ್ಯ ಅರ್ಥಾತ್ ವಕ್ಷೋಽಸ್ಥಿಯ ಕಡೆಗೆ, ಆದರೆ ಸ್ವಲ್ಪ ಕೆಳಗಡೆಗೆ ಹಚ್ಚಿ ಶಬ್ದವನ್ನು ಕೇಳಿರಿ. ವಕ್ಷೋಭಾಗ ಎದೆಯಿಂದ ಚನ್ನಾಗಿ

ಹಚ್ಚಿರತಕ್ಕುದು. ಅಂದರೆ ಯಂತ್ರ ಮತ್ತು ಎದೆಯ ನಡುವೆ ಸಡಿಲವಾಗಿ ವಾಯುವು ಹರಿದಾಡಬಾರದು. ಕಿವಿಗಳಲ್ಲಿಯೂ ಕರ್ಣಖಂಡವನ್ನು ಚನ್ನಾಗಿ ಹಚ್ಚಬೇಕು. ಹೃದಯವಿಸ್ತೃತಿ (Dilation of the heart) ಯಲ್ಲಿ ಹೃದಯದ ಕೆಳಭಾಗವು (Ventricle) ಹೆಚ್ಚು ಕೆಳಗಡೆ ಮತ್ತು ಮಗ್ಗಲಿಗೆ ಆಗುತ್ತದೆ. ವಕ್ಷೋಭಾಗವನ್ನು ಅತ್ತಿಂದಿತ್ತ ಮಾಡಿ ಎಲ್ಲಿ "ಲುಪ್-ಡುಪ್" ಎಂಬ ಶಬ್ದವು ಸರಿಯಾಗಿ [ಹೆಚ್ಚು] ಕೇಳಿಸುತ್ತದೆಯೋ ಅದೇ ಹೃದಯದಕ್ಷೇಪಕ ಕೋಷ್ಠ (Ventricle) ದ ನಿಶ್ಚಿತ ಸ್ಥಾನವೆಂದು ತಿಳಿದುಕೊಳ್ಳತಕ್ಕುದು. ಈ ಯಂತ್ರದಿಂದ ಹೃದಯದ ಬಲಾಬಲ ಹಾಗೂ ಗತಿಯ ಜ್ಞಾನವಾಗುತ್ತದೆ. ಜ್ವರದ ಆಮ ಅಥವಾ ಪ್ರಾರಂಭಿಕ ಅವಸ್ಥೆಯಲ್ಲಿ ಹೃದಯವು ಬಲವಾನ್ ಮತ್ತು ಜೀರ್ಣಾವಸ್ಥೆಯಲ್ಲಿ ತೀಕ್ಷ್ಣಪ್ರತೀತವಾಗುತ್ತದೆ. ಶ್ರಮದ ಅವಸ್ಥೆಯಲ್ಲಿ ಹೃದಯ ಗತಿಯು ತೀವ್ರವಾಗುತ್ತದೆ. ಮತ್ತು ವಿಶ್ರಾಂತಿಯಲ್ಲಿ ಮಂದವಾಗುತ್ತದೆ. ಹೃದ್ದ್ರಾವ (Palpitation) ದಲ್ಲಿ ಶಬ್ದವು ಪ್ರಾಯಃ ಎಲ್ಲ ಎದೆಯ ಮೇಲೆ ಕೇಳಿಸುತ್ತಿದೆ. ಮತ್ತು ನಡುಗು ಹೆಚ್ಚಾಗುತ್ತದೆ. ಇದಕ್ಕೆ [Murmur] ಎಂದೂ ಸಹ ಎನ್ನುತ್ತಾರೆ. ಹೃದಯ ಕಪಾಟ Valve ದ ಶಿಥಿಲವಾಗುವದರಿಂದ ಅಥವಾ ಒಡೆದು [ಹರಿದು] ಹೋಗುವದರಿಂದ ರಕ್ತವು ಪುನಃ ಕ್ಷೇಪಕ ಕೋಷ್ಠದಲ್ಲಿ ತಿರುಗಿ ಬರುತ್ತದೆ. ಇದರಲ್ಲಿ ರಕ್ತವು "ಗಡ್-ಗಡ್'' ಎಂಬ ಶಬ್ದವನ್ನು ಮಾಡುತ್ತ ತಿರುಗುವ ಶಬ್ದವುಕೇಳಬರುತ್ತದೆ. ಈ ಅವಸ್ಥೆಗೆ(Regurgitation of the heart) ಎಂದೆನ್ನುತ್ತಾರೆ. ತೀಕ್ಷ್ಣ ಅಥವಾ ಮೃತಪ್ರಾಯ ಅವಸ್ಥೆಯಲ್ಲಿ ಹೃದಯವು ಅತಿ ದುರ್ಬಲ ಶಬ್ದ [Feeble Sounds] ವನ್ನು ಕೊಡುತ್ತದೆ. ಮತ್ತು ಯಾವಾಗಾದರೂ ನಿಲ್ಲುತ್ತ [Failing heart] ಕೇಳಿಸುತ್ತದೆ. ಸಂಪೂರ್ಣ ಹೃದಯಾವರೋಧ [Heart—failure] ದ ಅವಸ್ಥೆಯಲ್ಲಿ ಶಬ್ದವು ಪೂರ್ಣ ನಿಲ್ಲುತ್ತದೆ. [ಎಷ್ಟೂ ಕೇಳಬರುವದಿಲ್ಲ]. ಇದೇ ಮೃತ್ಯು ‡ ಇರುತ್ತದೆ.

---

‡ ಏನು ಮೃತ್ಯುವು [ಮರಣವು] ಕೈಹೃದಯಾವರೋಧನವಾಗುವದರಿಂದ ಬರುತ್ತದೋ ಅಥವಾ ಆಯುಷ್ಯ ಸಮಾಪ್ತಿಯಾದನಂತರ ಹೃದಯವು ಸ್ತಬ್ಧವಾಗುವದು [ನಿಲ್ಲುವದು] ಅನಿವಾರ್ಯವಿದೆಯೋ ? ಈ ವಿಷಯವು

ಪುಪ್ಪುಸ ಪರೀಕ್ಷೆಯ ಆವಶ್ಯಕತೆಯು ಕಾಸ, ಶ್ವಾಸ, ಕ್ಷಯ, ಪಾರ್ಶ್ವ ಶೂಲ, (Pleurisy) ಕರ್ಕಟಕ ಸನ್ನಿಪಾತಾದಿ ಜ್ವರಗಳಲ್ಲಿ ಬೀಳುತ್ತದೆ. ಏತದರ್ಥ ಆದ್ದರಿಂದ (ಯಂತ್ರದ) ವಕ್ಷೋಭಾಗವನ್ನು ಎದೆಯ ದಕ್ಷಿಣ ಭಾಗ ಹಾಗೂ ಬೆನ್ನಿನಮೇಲೆ ಎರಡೂಕಡೆಗೆ ಕೆಳಗೆ ಮತ್ತು ಮೇಲೆ ಹಚ್ಚಿದರೆ ಶ್ವಾಸಕೋಶದ ಶಬ್ದ ಅಥವಾ ಶ್ವಾಸೋಛ್ವಾಸ (Breathing sound)ದ ಜ್ಞಾನವಾಗುತ್ತದೆ. ಶ್ವಾಸಕೋಶದ ಪರೀಕ್ಷೆಯನ್ನು ಮಾಡುವ ಸಮಯ ದಲ್ಲಿ ರೋಗಿಗೆ– 'ಮುಖವನ್ನು ಮುಚ್ಚಿಕೊಂಡು ಮೂಗಿನಿಂದ ಬಲಪೂರ್ವಕ ಶ್ವಾಸವನ್ನು ಎಳೆದುಕೊಳ್ಳಲಿಕ್ಕೆ ಆದೇಶ ಮಾಡತಕ್ಕದ್ದು. ವೈದ್ಯನು ಮೊದಲು ಸ್ವಸ್ಥಾವಸ್ಥೆಯಲ್ಲಿ ಶ್ವಾಸಕೋಶಗಳ ಶಬ್ದವನ್ನು ಕೇಳುವ ಅಭ್ಯಾಸ ವನ್ನು ಮಾಡತಕ್ಕದ್ದು. ಆನಂತರ ರೋಗಾವಸ್ಥೆಯಲ್ಲಿ ಪರೀಕ್ಷಿಸತಕ್ಕದ್ದು. ತಮಕ ಶ್ವಾಸದಲ್ಲಿ ಶ್ವಾಸಪ್ರಣಾಲಿಗಳು (ಯಾವದಕ್ಕೆ ಚರಕಾಚಾರ್ಯರು 'ಶ್ವಸನಾ' ಎಂದಿದ್ದಾರೆ) ಹತ್ತಿಯಾಗುವದರಿಂದ ವಾಯುವಿನ ಸಂಚಾರ ವಾಗುವದು ಕಠಿಣವಾಗುತ್ತದೆ. ಮತ್ತು ಕೂಗು Wheezing sounds ಕೇಳಬರುತ್ತದೆ. ಪಾರ್ಶ್ವಶೂಲಿಯಲ್ಲಿ ಶಬ್ದವು ಮಂದ (Dull)ವಾಗುತ್ತದೆ. ಹಾಗೂ ನ್ಯೂಮೋನಿಯಾ (Pneumonia) ದ ಅಂತಿಮ ಅವಸ್ಥೆಯಲ್ಲಿ ಆವಾಗ ಪುಪ್ಪುಸಗಳು ಗಟ್ಟಿಯಾಗುತ್ತವೆ. ಶ್ಲೇಷ್ಮವು ಅಧಿಕವಾಗಿದ್ದರೆ ಘುರಘುರ ಎಂಬ ಶಬ್ದವು ಕೇಳಿಸುತ್ತಿದೆ. ರಾಜಯಕ್ಷ್ಮಾ ರೋಗದಲ್ಲಿ ದೂಷಿತ (Affected) ವಾಗಿದ್ದರೆ ಆದರಲ್ಲಿ 'ಚಿಟ್– ಚಿಟ್'ಎಂಬ ಶಬ್ದವು (Crepitations) ಕೇಳುವದರಲ್ಲಿ ಬರುತ್ತದೆ. ವಾತಿಕಕಾಸದಲ್ಲಿ ಶಬ್ದವು ಬಲವಾನ್ (ಅತಿ ಜೋರಿನಿಂದ) ಕೇಳಿಸುತ್ತಿದೆ. ಶ್ಲೈಷ್ಮಿಕ ಕಾಸದಲ್ಲಿ ಶ್ಲೇಷ್ಮಾ ಅಥವಾ ಆದ್ರತೆಯ ಜ್ಞಾನವು ಸುಗಮತೆಯಿಂದ ಆಗುತ್ತದೆ; ಇತ್ಯಾದಿ ಭಾವಗಳು (ಅಭ್ಯಾಸದಿಂದ) ತಿಳಿದು ಬರುತ್ತವೆ.

---

ವಿಚಾರಾರ್ಹವಾಗಿದೆ. ಮೊದಲನೇ ಮತವು ನಾಸ್ತಿಕರದಾಗಿದೆ; ಯಾರು ಜೀವಾತ್ಮನನ್ನು ನಂಬುವದಿಲ್ಲ. ತಿನೆದುಲೀಆಸ್ತಿಕರದಿದೆ, ಯಾರು ಜೀವಾತ್ಮನು ಶರೀರದಿಂದ ಬೇರೆಯಾಗುವದಕ್ಕೆ (ಹೋಗುವದಕ್ಕೆ) ಮೃತ್ಯು ಎನ್ನುತ್ತಾರೆ. ಆಗ್ಗೆ ಮೂರ್ಧಾ, ಹೃದಯ, ಪುಪ್ಪುಸ, ನೇತ್ರ, ಕರ್ಣ, ಕಂಠಾದಿ ಎಲ್ಲ ಅವಯವಗಳು ತಮ್ಮ ಕಾರ್ಯವನ್ನು ಬಿಟ್ಟುಬಿಡುತ್ತವೆ.

ಹೃದಯ ಅಥವಾ ಪುಪ್ಪುಸದ ಸಮ್ಯಕ್ ಜ್ಞಾನಾರ್ಥವಾಗಿ ಡಾ. ತ್ರಿಲೋಕಿನಾಥಕೃತ 'ನಮ್ಮ ಶರೀರದ ರಚನೆ' ಅಥವಾ ಮ. ಮ ಶ್ರೀ ಗಣನಾಥ ಸೇನಕೃತ 'ಪ್ರತ್ಯಕ್ಷ ಶಾರೀರ' ಮತ್ತು ತತ್ಸಂಬಂಧೀ ರೋಗ ಜ್ಞಾನಾರ್ಥವಾಗಿ ಡಾ ಆಶಾನಂದಕೃತ 'ವ್ಯಾಧಿ ವಿಜ್ಞಾನ' ಎಂಬ ಗ್ರಂಥ ಗಳು ನೋಡತಕ್ಕವಾಗಿವೆ. ಹೆಚ್ಚಿನ ವ್ಯಾಖ್ಯೆಯು ಈ ಪುಸ್ತಕದ ಸೀಮೆಯ ಹೊರಗಿದೆ.

೧೩) ಭ್ರೂಣಉರೋವೀಕ್ಷಣಯಂತ್ರ * Monoaural stethoscope). ದ್ವಿಮುಖೀ ನಾಡಿ ಯಂತ್ರವು. ಭ್ರೂಣರ ಹೃದಯಗತಿ Foetal heart sounds) ಯನ್ನು ತಿಳಿಯಲಿಕ್ಕೆ ಬರುತ್ತದೆ. ಇದರ ಮೇಲಿನ ಭಾಗವನ್ನು ವೈದ್ಯನು ತನ್ನ ಕಿವಿಗೆ ಹಚ್ಚುವದು. ಕೆಳಗಿನ ಭಾಗವನ್ನು ಗರ್ಭಿಣಿ ಸ್ತ್ರೀಯ ಉದರದಮೇಲೆ ನಾಭಿಕಿಂತಲೂ ಕೆಳಗಡೆ ಇಡತಕ್ಕುದು. ಯಂತ್ರವನ್ನು ಇತ್ತಿಂದತ್ತ ಸರಿದಾಡಿಸಿ ಎಲ್ಲಿ ಶಬ್ದವು ಚನ್ನಾಗಿ ಕೇಳಬರುತ್ತಿವೆಯೋ ಅಲ್ಲಿ ಭ್ರೂಣ (ಕೂಸಿನ) ಹೃದಯವಿದೆ ಯೆಂದು ತಿಳಿಯತಕ್ಕುದು.

೧೪) ತಾಪಮಾಪಕ

ಇದನ್ನು ಇತ್ತೀಚಿನವರು ಉಪಯೋಗಿಸುತ್ತಾರೆ. ಇದರ ಉಪ ಯೋಗದಿಂದ ತರ್ಕ, ಬುದ್ಧಿ ಬೆಳೆಯಲಾರವು. ಇದು ಕೇವಲ ಶರೀರೋಷ್ಮವನ್ನೇ ತೋರಿಸುತ್ತಿದೆಯಲ್ಲದೆ ಯಾವ ಕಾರಣದಿಂದ ಉಷ್ಣತೆ ಉತ್ಪನ್ನ ವಾಗಿದೆ ಎಂದು ತೋರಿಸುವದಿಲ್ಲ. ಆಯುರ್ವೇದ ಗ್ರಂಥಗಳಲ್ಲಿ ಇದರ ಉಲ್ಲೇಖವಿರುವದಿಲ್ಲ.

ಶಯ್ಯಾಗತ [ ಅಡ್ಡವಾಗಿಟ್ಟ ] ತಾಪಮಾಪಕವನ್ನು (Clinical Thermometer ) ಜ್ವರದಲ್ಲಿ ರೋಗಿಯ ತಾಪಮಾನವನ್ನು (Temperature) ತಿಳಿಯಲಿಕ್ಕಾಗಿ ಈ ಕಾಲದಲ್ಲಿ ಪ್ರಯೋಗ ಮಾಡ

* ಈ ಯಂತ್ರದಲ್ಲಿ ಒಂದೇ ಕರ್ಣದ ಪ್ರಯೋಗವಾಗುವದರಿಂದ ಇದಕ್ಕೆ Mono [ಒಂದು] aural [ಕರ್ಣವುಳದ್ದು] ಎನ್ನುತ್ತಾರೆ. ಮತ್ತು ಎರಡನೇದ್ದಕ್ಕೆ Binaural stethoscope [ದ್ವಿಕರ್ಣೀ] ಎನ್ನುತ್ತಾರೆ.

ಲಾಗುತ್ತಿದೆ. ಇದು ಒಂದು ಕಾಜಿನಕೊಳವೆ ಇದೆ. ಇವರ ಕೆಳಗಡೆಗೆ ಒಂದು ಸಂಣಕೋಶವಿರುತ್ತದೆ (Bulb). ಅದರಲ್ಲಿ ಪಾರಜ Mercury ಇರುತ್ತದೆ. ಶರೀರ ಸ್ಪರ್ಶದಿಂದ ಉಷ್ಣತೆಯ ಕಾರಣ ಪಾರಜದ ಪರಿವೃದ್ಧಿ (Expansion) ಆಗುವದರಿಂದ ಅದು ಮೇಲೆ ಕೊಳವೆಯಲ್ಲಿ ಏರುತ್ತದೆ. ಮತ್ತು ಶರೀರದ ತಾಪ (ಉಷ್ಣತೆ) ದ ಬೋಧ ಮಾಡುತ್ತದೆ. ಹೀಗೆ ಇದು ಒಂದು ನಿರ್ಮುಖ ನಾಡೀಯಂತ್ರವಾಗಿದೆ. ಇದರಲ್ಲಿ ೯೫ ರಿಂದ ೧೧೦ ರ ವರೆಗೆ ಅಂಕಿಗಳಿರುತ್ತವೆ. ಅವು ತಾಪಾಂಶದ [Degrees] ಬೋಧಕವಾಗಿವೆ. ಒಂದು ಅಂಶದಲ್ಲಿ ಪುನಃ ೫ ಸಣ್ಣ ಸಣ್ಣ ರೇಖೆಗಳಿರುತ್ತವೆ. ಅವು. ೨ ಅಥವಾ ೧/೫ ಭಾಗದ ಸಮಾನವಾಗಿರುತ್ತವೆ. ೯೫° ಕ್ಕಿಂತ ಕೆಳಗೆ ಒಂದು ಸಂಣದಾದ ವಕ್ರತೆಯು (Curve) ಇರುತ್ತದೆ. ಇದು ಪಾರಜವು ತಾನಾಗಿಯೇ ಕೆಳಗೆ ಇಳಿಯುವದನ್ನು ತಡೆಯುತ್ತದೆ. ಜಾಡಿಸುವದರಿಂದ ಪಾರಜವು ತೀವ್ರ ಕೆಳಗಿಳಿಯುತ್ತದೆ. ಪ್ರಯೋಗದ ಪೂರ್ವದಲ್ಲಿ ತಾಪ ಮಾಪಕ ಯಂತ್ರವನ್ನು ನೀರಿನಿಂದ ತೊಳೆಯುವದೂ ಹಾಗೂ ಜಾಡಿಸಿ ಪಾರಜವನ್ನು ಕೆಳಗಿಳಿಸುವದೂ ಆವಶ್ಯಕವಾಗಿದೆ. ಸ್ವಸ್ಥ ಮನುಷ್ಯನ ತಾಪಮಾನವು (ನಾಲಿಗೆಯ ಕೆಳಗಿಡುವದರಿಂದ) ೯೮. ೪° ಅಥವಾ ೯೮.೬° ಫಾ. (98.4° or 98.6° F ) ಇರುತ್ತದೆ. ಇದಕ್ಕಿಂತಲೂ ಹೆಚ್ಚು ಉಷ್ಣತೆಯು (ತಾಪಾಂಶವು) ಜ್ವರದ ಬೋಧಕವಿದೆ. ಇವಕ್ಕಿಂತಲೂ ಕಡಿಮೆ ತಾಪಾಂಶವು ಕ್ಷೀಣತೆಯ ಬೋಧಕವಿದೆ. ೯೫° ಫಾ. ಕ್ಕಿಂತಲೂ ಕೆಳಗೆ ತಾಪಾಂಶವಿದ್ದರೆ ಅದು ಮೃತ್ಯುವಿನ ಚಿನ್ಹವೂ ಹಾಗೂ ಇದಕ್ಕಿಂತಲೂ ಹೆಚ್ಚು ಮೇಲ್ಗಡೆಗೆ ತಾಪಾಂಶವು ಜೀವನದ ಲಕ್ಷಣವೂ ಆಗಿದೆ. ತಾಪಮಾನದ ಜ್ಞಾನದಿಂದ ಜ್ವರದ ಪ್ರಕಾರಗಳ ಬೋಧವೂ ಆಗುತ್ತದೆ. ಯಥಾ- ವಿಷಮ ಜ್ವರ (Malaria) ದಲ್ಲಿ ತಾಪಾಂಶವು ಪ್ರಾಯಃ ೧೦೫° ದವರೆಗೆ ಅಥವಾ ಕೆಲವೇಳೆ ೧೦೬° ಅಥವಾ ೧೦೭° ಫಾ. ವರೆಗೆ ಮುಟ್ಟುತ್ತದೆ. ಅಧಿಕತಮ ತಾಪಾಂಶವು ೧೧೩° ಫಾ. ದವರೆಗೆ ಇರುವದನ್ನು ನೋಡಲಾಗಿದೆ. ಮಂಥರ ಜ್ವರ (Typhoid)ದ ಎರಡನೇವಾರದಲ್ಲಿ ಪ್ರಾತಃಕಾಲದಲ್ಲಿ ಬಹುಶಃ ೧೦೩° ಫಾ. ಮತ್ತು ಸಾಯಂಕಾಲ ೧೦೫° ಫಾ. ಆಗುತ್ತದೆ. ಅರ್ಥಾತ್ ಪ್ರಾತಃಕಾಲ ಸಾಯಂಕಾಲದ ತಾಪಮಾನದಲ್ಲಿ

೨೦ ದ ಭೇದವನ್ನು ನೋಡಲಾಗುತ್ತಿದೆ. ರಾಜಯಕ್ಷ್ಮದಲ್ಲಿ ಪ್ರಾತಃ ೯೯೦ ಫಾ., ಸಾಯಂ ಬಹುಶಃ ೧೦೧° ಅಥವಾ ೧೦೨° ಫಾ. ಇರುತ್ತದೆ ಇತ್ಯಾದಿ. ಪುನಃ ತಾಪಾಂಶದ ಸಂಬಂಧವು ನಾಡೀಯಿಂದಲೂ ಇದೆ. ಪುರುಷರ ನಾಡಿಯ ಗತಿಯು ಬಹುಶಃ ೭೨ ಪ್ರತಿ (ಮಿನಿಟು) ನಿಮಿಷಕ್ಕೆ ಇರುತ್ತದೆ. ಹೇಗೆಂದರೆ— ಒಬ್ಬ ವ್ಯಕ್ತಿಯ ತಾಪಾಂಶವು ೧೦೪.೪° ಫಾ. ಇರುತ್ತದೆ. ಅರ್ಥಾತ್ ಸ್ವಸ್ಥನಿಗಿಂತಲೂ ೬ ಅಂಶವು ಮೇಲೆ (ಹೆಚ್ಚಿಗೆ) ಇದೆ. ಅವನ ನಾಡಿಯ ಗತಿಯು (Beats) ಇರುವದು ೭೨+(೬×೫)=೧೦೨ ಈ ರೀತಿ ಯಾಗಿ ನಾಡಿಯ ಗತಿಯಿಂದ ತಾಪಮಾನದ ತಿಳುವಳಿಕೆಯು ಸಂಭವಿಸು ತ್ತದೆ. ಒಂದು ವೇಳೆ ನಾಡಿಯ ಗತಿಯು ೯೭ ಇದ್ದರೆ ತಾಪಮಾನವು ಎಷ್ಟಾ ಯಿತು? ತೋರಿಸಿರಿ. ಮಂದಜ್ವರದಲ್ಲಿ ತಾಪಮಾನಕ್ಕಿಂತಲೂ ನಾಡೀ ಗತಿಯು ಮಂದವಾಗುತ್ತದೆ. ಶಿಶುಗಳಿಗೆ ತಾಪಮಾಪಕವನ್ನು ಬಗಲು ಅಥವಾ ವಂಕ್ಷಣದ ಸಂಧಿಯಲ್ಲಿ ಹಚ್ಚಲಾಗುತ್ತಿದೆ. ಅಲ್ಲಿಯ ತಾಪಮಾನವು ಮುಖಕ್ಕಿಂತಲೂ ಒಂದು ಅಂಶ ಕಡಿಮೆಯೆಂದು ತಿಳಿಯತಕ್ಕದು. ಕುದುರೆ ಮೊದಲಾದ ಪಶುಗಳ ಡೆಶೆಯಿಂದ ಒಂದು ಬೇರೆ ದೀರ್ಘವಾದ ತಾಪ ಮಾಪಕವಿರುತ್ತದೆ. ಅದನ್ನು ಅವುಗಳ ಗುದದಲ್ಲಿ ಹಚ್ಚಿ ಜ್ವರದ ತಾಪಾಂಶ ವನ್ನು ತಿಳಿಯಲಾಗುತ್ತಿದೆ.

ಸ್ತ್ರೀಯರ ನಾಡೀ ಗತಿಯು (Beats) ಪ್ರಾಯಃ ೮೦, ನವಜಾತ ಶಿಶುವಿನ ಗತಿಯು ೧೧೦, ವರ್ಷದವರೆಗೆ— ೧೦೦, ಹೀಗೆ ಸಾವಕಾಶವಾಗಿ ಕಡಿಮೆಯಾಗುತ್ತ ಹೋಗುತ್ತಿದೆ. ಪರಿಶ್ರಮ ಮಾಡುವದರಿಂದ ಹೃದಯ ಗತಿ (ಅಥವಾ ನಾಡೀ ಗತಿಯು) ಹೆಚ್ಚಾಗುತ್ತದೆ. ಮತ್ತು ವಿಶ್ರಾಂತಿ ಹೊಂದುವದರಿಂದ ಕಡಿಮೆಯಾಗುತ್ತದೆ. ನಾಡೀ ಪರೀಕ್ಷಣ ಅಥವಾ ತಾಪಮಾಪಕ ಅಥವಾ ಉರೋವೀಕ್ಷಣ ಯಂತ್ರದ ಪ್ರಯೋಗವನ್ನು ಸ್ವಸ್ಥ ವಾಗಿದ್ದಾಗ ಮಾಡಬೇಕು.

೧೫) ಮೂತ್ರಮಾಪಕ (Urinometer) :— ಈ ಯಂತ್ರ ದಿಂದ ಮೂತ್ರರೋಗ ವಿಶೇಷತಃ ಮಧುಮೇಹದ ಜ್ಞಾನವಾಗುತ್ತದೆ ಇದಾ ದರೂ ನಿರ್ಮುಖ ಉಳ್ಳ ನಾಡೀಯಂತ್ರವಾಗಿದೆ. ಇದರ ಅಧಃ ಕೋಶದಲ್ಲಿ ಪಾರದವಿರುತ್ತದೆ. ಮತ್ತು ಉಳಿದ ನಳಿಕೆಯು ವಾಯುಶೂನ್ಯವಾಗಿದೆ.

ಇದರ ಮೇಲೆ ೧೦೦೦ (ಸಾವಿರ) ದಿಂದ ೧೦೬೦ ರ ವರೆಗೆ ಅಂಕಿಗಳಿರುತ್ತವೆ. ಇದನ್ನು ನೀರಿನಲ್ಲಿ ಹಾಕಿದರೆ ಈ ಯಂತ್ರವು ೧೦೦೦ ಅಂಕಿಯವರೆಗೆ ಮುಳುಗುವದು. ಮತ್ತು ಸ್ವಸ್ಥ ಪುರುಷನ ಮೂತ್ರದಲ್ಲಿ ಪ್ರಾಯಃ ೧೦೧೫ ರಿಂದ ೧೦೩೫ರ ವರೆಗೆ ಮುಳುಗುವದು. ಇದರ ಅರ್ಥವು ಹೀಗಿದೆ— ನೀರಿನ ೧೦೦೦ ಭಾಗಗಳಲ್ಲಿ ಒಂದು ವೇಳೆ ೧೦ ಭಾಗವು ಶರ್ಕರಾದಿ ಯಾವದಾದರೂ ಪದಾರ್ಥವು ಮಿಶ್ರಿತವಾಗಿದ್ದರೆ ಇದರಲ್ಲಿ ಆ ಯಂತ್ರವು ೧೦೧೦ ವರೆಗೆ ಮುಳುಗುವದು. ೩೦ ಭಾಗವನ್ನು ಮಿಶ್ರಮಾಡಿದ್ದರೆ ೧೦೩೦ ರವರೆಗೆ ಮುಳುಗುತ್ತದೆ. ಹೀಗೆ ಮೂತ್ರವು ವಸ್ತುತಃ ಜಲ (ನೀರು) ವಿರುತ್ತದೆ. ಪರಂತು ಇದರಲ್ಲಿ ಯೂರ್ಯ್ಯಾದಿ ದ್ರವ್ಯ ಬೆರೆತುಹೋಗಿರುತ್ತವೆ. ಅದನ್ನು ನೀರಿನಿಂದ ಅನುಪಾತ (ಮಿಶ್ರಣವು) ವು ಈ ಯಂತ್ರದಿಂದ ಜ್ಞಾತವಾಗುತ್ತದೆ. ಉದಕ ಮೇಹದಲ್ಲಿ ಮೂತ್ರಮಾಪಕವು ಪ್ರಾಯಃ ೧೦೦೦ದ ವರೆಗೆ ಮುಳುಗುತ್ತದೆ. ಇದರ ಅರ್ಥ– ರೋಗಿಯ ಮೂತ್ರವು ಕೇವಲ ನೀರು ಇರುತ್ತದೆ. ಆದ್ದರಿಂದ ಇದಕ್ಕೆ ಋಷಿಗಳು ಜಲಮೇಹವೆಂದೇ (Diabetesinsipidus) ಎಂದಿದ್ದಾರೆ. ಇದು ಮೂತ್ರಾಶಯ ಹಾಗೂ ವೃಕ್ಕಗಳ ದುರ್ಬಲತೆಯಿಂದ ಆಗುತ್ತದೆ. ಯಾವನ ಮೂತ್ರದಲ್ಲಿ ಮೂತ್ರಮಾಪಕ ಯಂತ್ರವು ೧೦೬೦ ಇದಕ್ಕೂ ಹೆಚ್ಚು ಅಂಕಿಗಳವರೆಗೆ ಮುಳುಗಿದರೆ ಅವನಿಗೆ ಮಧುಮೇಹ (Diabetes milietus) ಇದೆ ಎಂದೇ ತಿಳಿಯತಕ್ಕದು. ಹೆಚ್ಚು ಅಂಕಿಗಳವರೆಗೆ ಮುಳುಗುವ (ಭಾವ) ಅರ್ಥವೇ ಮೂತ್ರದಲ್ಲಿ ಸಕ್ಕರೆಯು ಇರುವದೆಂಬುದನ್ನು ತಿಳಿಸುತ್ತದೆ *

೧೬) ದುಗ್ಧಮಾಪಕ (Lactometer)† :— ನಾಡೀಯಂತ್ರದಲ್ಲಿ ಮೇಲ್ಗಡೆಗೆ 'ಜ' ಮತ್ತು ಕೆಳಗಡೆಗೆ 'ದ' ಚಿನ್ಹವಿದೆ. ಮತ್ತು ಮಧ್ಯದಲ್ಲಿ

---

* ಈ ಯಂತ್ರದ ಉಲ್ಲೇಖವು ಆಯುರ್ವೇದದಲ್ಲಿರುವದಿಲ್ಲ. ಆದರೆ ಮೂತ್ರ ಪರೀಕ್ಷೆಯ ಅನ್ಯ ಸುಲಭ ವಿಧಾನಗಳು ಚರಕ ಚಿ. ಸ್ಥಾನ ಅ. ೬ ಶ್ಲೋಕ ೯ ರಿಂದ ೧೩ವರೆಗೆ; ಸು. ನಿ. ಅ. ೬ ರಲ್ಲಿ ಸೂತ್ರ ೧೦ ರಿಂದ ೧೩ ವರೆಗೆ ಮತ್ತು ವಾಗ್ಭಟ ನಿ. ಸ್ಥಾ. ಅ. ೧೦ ರಲ್ಲಿ ಶ್ಲೋಕ ೭ ರಿಂದ ೧೮ ರ ವರೆಗೆ ಹೇಳಲ್ಪಟ್ಟಿವೆ.

† ಈ ಯಂತ್ರದ ಉಲ್ಲೇಖವು ಆಯುರ್ವೇದದಲ್ಲಿ ಇರುವದಿಲ್ಲ. ಆದರೆ ಪರೀಕ್ಷಾ ವಿಧಾನಗಳು ಚರಕ ಶಾ. ಸ್ಥಾ. ಅ. ೮ ಸೂತ್ರ ೫೮ ರಿಂದ

೧, ೨, ೩ ಕ್ರಮವಾಗಿ ಅಂಕೆಗಳಿವೆ. ಈ ಯಂತ್ರವನ್ನು ನೀರಿನಲ್ಲಿ ಹಾಕಿದರೆ ಇದು 'ಜ' ದ ವರೆಗೆ ಮುಳುಗುವದು. ಮತ್ತು ಹಸಿ ಹಾಲು, ಶುದ್ಧವಾದ ಹಾಲಿನಲ್ಲಿ ಹಾಕುವದರಿಂದ 'ದ' ದ ವರೆಗೆ ಮುಳುಗುವದು. ಒಂದು ವೇಳೆ ಹಾಲಿನಲ್ಲಿ ೧ ಭಾಗವು ನೀರು ಕೂಡಿದ್ದರೆ, '೩' ರ ವರೆಗೆ, ೨ಭಾಗ ನೀರು ಕೂಡಿದ್ದರೆ '೨' ರ ವರೆಗೆ, ಮತ್ತು ಕೇವಲ ೩ ಭಾಗ ನೀರು ಒಂದೇ ಭಾಗ ಹಾಲು ಕೂಡಿದ್ದರೆ, '೧' ರ ವರೆಗೆ ಮುಳುಗುವದು. ಇದರಲ್ಲಿ ಸ್ವಲ್ಪ ಅಪವಾದವೂ ಇದೆ. ಇದರ ಮತ್ತು ತಾಪಮಾಪಕಾದಿಯಂತ್ರಗಳ ಸಮ್ಯಕ್ ಜ್ಞಾನಾರ್ಥವಾಗಿ 'ಭೌತಿಕೀ' (Physics) ಎಂಬ ಗ್ರಂಥವನ್ನು ನೋಡಿರಿ.

೧೭) ಆಶ್ಚ್ಯೋತಕ (Dropper). ಇದು ಕಣ್ಣಿನಲ್ಲಿ ದ್ರವ ಔಷಧಿಯನ್ನು ಬಿಂದುಶಃ ಹಾಕಲಿಕ್ಕೆ ಪ್ರಯುಕ್ತವಾಗುತ್ತದೆ. ರಬ್ಬರವನ್ನು ಒತ್ತುವದರಿಂದ ವಾಯುವು ಹೊರಗೆ ಬರುತ್ತದೆ. ಮತ್ತು ಸಡಿಲು ಬಿಡುವದರಿಂದ ದ್ರವ ಪದಾರ್ಥವು ನಳಿಕೆಯಲ್ಲಿ ತುಂಬಿಕೊಳ್ಳುತ್ತದೆ. ರಬ್ಬರವನ್ನು ಪುನಃ ಹತ್ತಿಕ್ಕುವದರಿಂದ ಔಷಧವು ಕಣ್ಣಿನಲ್ಲಿ ಬಿಂದುಬಿಂದುವಾಗಿ (Drop by Drop) ಬೀಳುತ್ತದೆ. ಈ ಕಾರ್ಯವು ಅರಳೆಯ ಬತ್ತಿಯಿಂದಲೂ ತೆಗೆದುಕೊಳ್ಳಲು ಬರುತ್ತದೆ. ಆಶ್ಚ್ಯೋತಕ ಯಂತ್ರವು ಏಕ ಮುಖೀ ನಾಡೀ ಯಂತ್ರವಿದೆ.

೧೮) ಅಂಗುಲಿತ್ರಾಣಕ (Finger guard). ಇದು ಹಸ್ತಿದಂತದ, ಕಾಷ್ಠ, ಅಥವಾ ಧಾತುಕೃತ ಕೋಶವಾಗಿರುತ್ತದೆ. ಇದನ್ನು ಬೆರಳಿನ ಮೇಲೆ ರಕ್ಷಣೆಯ ದೆಶೆಯಿಂದ ಏರಿಸಲಾಗುತ್ತದೆ. ವಾಗ್ಭಟರು ಇದನ್ನು ನಾಡೀಯಂತ್ರದಲ್ಲಿ ಎಣಿಸಿದ್ದಾರೆ. ಯಥಾ- "ಅಂಗುಲಿತ್ರಾಣಕಂ ದಾಂತಂ ವಾರ್ಕ್ಷಂ ವಾಚತುರಂಗುಲಮ್। ದ್ವಿಚ್ಛಿದ್ರಂ ಗೋಸ್ತನಾಕಾರಂ ತದ್ ವಕ್ತ್ರವಿವೃತೌ ಮುಖಂ॥೨೦॥ (ಅ. ಹೃ. ಸೂ. ಅ. ೨೫). ಇದು ನಾಲ್ಕುಅಂಗುಲ ಉದ್ದವಾಗಿದ್ದು ಮುಖವನ್ನು ತೆರೆಯುವ ಕೆಲಸದಲ್ಲಿ ಬರುತ್ತದೆ. ಈಗಿನ ಕಾಲದಲ್ಲಿ ಈ ಪ್ರಯೋಜನೆಯ ದೆಶೆಯಿಂದ ರಬ್ಬರ ಕೋಶ (Finger

೫೫ರ ವರೆಗೆ; ವಾಗ್ಭಟ ಉ. ತಂತ್ರ ಅಧ್ಯಾಯ ೨, ಶ್ಲೋ. ೨ ರಿಂದ ೪ ರ ವರೆಗೆ ಹೇಳಲ್ಪಟ್ಟಿವೆ.

all)ವು ಪ್ರಯುಕ್ತವಾಗುತ್ತದೆ. ಹಾಗೂ ಇದನ್ನು ಹಾಕಿಕೊಂಡು ಮಲ ಮೂತ್ರಾದಿಗಳ ಸ್ಪರ್ಶ ಮಾಡಲಾಗುತ್ತಿದೆ. ಹೀಗೆ ಹಸ್ತತ್ರಾಣ (Hand gloves) ಸಂಪೂರ್ಣ ಹಸ್ತರಕ್ಷಣಾರ್ಥವಾಗಿ ಈ ಕಾಲದಲ್ಲಿ ದೊರೆಯುತ್ತಿವೆ.

೧೯)ಬಸ್ತಿಯಂತ್ರ(Enema syringe). ಈ ಯಂತ್ರವು ಪ್ರಾಚೀನ ಕಾಲದಲ್ಲಿ ಆಜ (ಆಡು) ಇತ್ಯಾದಿಗಳ ಮೂತ್ರಾಶಯ (ಬಸ್ತಿ Bladder) ವನ್ನು ಒಣಗಿಸಿ ಮಾಡಲಾಗುತ್ತಿತ್ತು. ಅದರ ಮುಖದಲ್ಲಿ ಧಾತು, ಶೃಂಗ, ವಂಶ, ಹಸ್ತಿದಂತ, ನರಸಲ ನಳಿಕೆ ಇತ್ಯಾದಿಗಳಿಂದ ಯಾವುದಕ್ಕೆ ಕಣ್ಣ (ಬಸ್ತಿನೇತ್ರ) ಎನ್ನುತ್ತಾರೋ (Nozzle) ಹಚ್ಚಿ ಮತ್ತು ಸೂತ್ರಾದಿ (ದಾರ) ಗಳಿಂದ ಬಿಗಿಯಾಗಿ ಕಟ್ಟಿ ಬಸ್ತಿಯ ದೆಶೆಯಿಂದ (Enema) ಪ್ರಯೋಗ ಮಾಡುತ್ತಲಿದ್ದರು. ಇದರಲ್ಲಿ ಕ್ವಾಥ, ಸ್ನೇಹಾದಿಗಳನ್ನು ರೋಗಾನುಸಾರವಾಗಿ ತುಂಬಲಾಗುತ್ತಿತ್ತು. ಬಸ್ತಿ ( ಮೂತ್ರಾಶಯ ) ದಿಂದ ಮಾಡಿಪ್ಪಾದುದರಿಂದ ಇದಕ್ಕೂ ಬಸ್ತಿ ಎಂಬ ಸಂಜ್ಞೆ ಕೊಡಲಾಗಿದೆ. ಪುನಃ ಇದು ರೂಕ್ಷ ಬಸ್ತಿ ( ಸ್ನೇಹವಿಲ್ಲದೇ ಅಥವಾ ಅಲ್ಪಸ್ನೇಹ ಯುಕ್ತ) ಮತ್ತು ಸ್ನಿಗ್ಧ ಬಸ್ತಿ ( ಕೇವಲ ಸ್ನೇಹ ಯುಕ್ತ ) ಎಂದು ಎರಡು ಪ್ರಕಾರವಾಗಿವೆ. ಇವುಗಳ ಸಂಜ್ಞೆಯು ಕ್ರಮವಾಗಿ ನಿರೂಹಣ ಮತ್ತು ಅನುವಾಸನ ಬಸ್ತಿಎಂದು ಇದೆ. ಬಸ್ತಿಯ ವರ್ಣನೆಯು ಚರಕ ಸಂಹಿತೆಯ ಸಿದ್ಧಿಸ್ಥಾನ ಅ. ೩ ರಲ್ಲಿ, ಸುಶ್ರುತ ಸಂಹಿತೆಯ ಚಿ.ಸ್ಥಾ. ಅ. ೩೫ ರಲ್ಲಿ ಮತ್ತು ವಾಗ್ಭಟ ಸಂಗ್ರಹದ ಸೂ. ಅ. ೧೯ ರಲ್ಲಿ ನೋಡಿರಿ. ಬಸ್ತಿ ಹಾಗೂ ನೇತ್ರಾದಿಗಳ ರಚನೆಯನ್ನು ಅಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಹಾಗೂ ಶಾರ್ಙ್ಗಧರ ಸಂಹಿತೆಯ ಉ ಖಂ. ಅ. ೫ರಲ್ಲಿ ಈ ವಚನಗಳು ದೊರೆಯುತ್ತಿವೆ — "ಮೃಗಾಜಸೂಕರಗವಾಂ ಮಹಿಷಸ್ಯಾಪಿವಾಭವೇತ್ । ಮೂತ್ರಕೋಷಸ್ಯ ಬಸ್ತಿಸ್ತು ತದಲಾಭೇ ಅನ್ಯಚರ್ಮಜಃ॥ " ಕಷಾಯ ರಕ್ತಃ ಸುಮೃದುರ್ಬಸ್ತಿಃ ಸ್ನಿಗ್ಧೋದೃಢೋಹಿತಃ ಅರ್ಥ— ಮೃಗ, ಅಜಾ, ಸೂಕರ, ಗೋ ಮತ್ತು ಮಹಿಷಗಳ ಮೂತ್ರಕೋಶ (Bladder) ದಿಂದ ಬಸ್ತಿಯನ್ನು ಮಾಡತಕ್ಕದು. ಮೂತ್ರಕೋಶದ ವ್ಯವಸ್ಥೆಯಾಗದಿದ್ದರೆ (ಸಿಗದಿದ್ದರೆ) ಅನ್ಯ ಚರ್ಮದಿಂದ ಬಸ್ತಿಯಂತ್ರವನ್ನು ಮಾಡಿಕೊಳ್ಳತಕ್ಕದು. ಇದು ಕಷಾಯದ ಬಣ್ಣ ಬಡಿದದ್ದೂ,'

ಮೃದುವಾದದ್ದೂ, ಸ್ನಿಗ್ಧ ಮತ್ತು ದೃಢವಾಗಿರತಕ್ಕದ್ದು. ಬಸ್ತಿನೇತ್ರ (Nozzle) ಸ್ತ್ರೀ ಪುರುಷ ಹಾಗೂ ಆಯುಃ ಭೇದದಿಂದ ಹೇಗೆ ಇರಬೇಕೆಂಬ ವರ್ಣನೆಯೂ ಅಲ್ಲಿ ಒಳ್ಳೇ ರೀತಿಯಾಗಿ ಮಾಡಲಾಗಿದೆ. ಬಸ್ತಿ ಕೊಡುವ ಪ್ರಕಾರವನ್ನು ವಾಗ್ಭಟಕಾರರು ಒಳ್ಳೇ ಸುಸ್ಪಷ್ಟರೀತಿಯಲ್ಲಿ ವರ್ಣಿಸಿದ್ದಾರೆ (ನೋಡಿರಿ. ಅ. ಹೃ. ಸೂ. ಅ. ೧೯ ಶ್ಲೋ. ೨೪ ರಿಂದ ೩೨ರ ವರೆಗೆ) ಮಲಬಾರ ( Malabar ) ದೇಶದಲ್ಲಿ ವೈದ್ಯರು ಈ ಶ್ಲೋಕವನ್ನು ಹೇಳಿ ಅದರಂತೆ ಬಸ್ತಿ ಕರ್ಮವನ್ನು ಮಾಡುವದು ವಿದಿತವಾಗಿದೆ. ರಬ್ಬರದಿಂದ ನಿರ್ಮಿತವಾದ ಆಧುನಿಕ ಬಸ್ತಿಯಂತ್ರ (Bulb enema syringe ರಬ್ಬರ ಪಿಚಕಾರಿ) ದ ಮಧ್ಯ ಒಂದು ರಬ್ಬರ ಕೋಶ (Bulb) ಇದೆ. ಇದರ ಒಂದು ಶಿರೋಭಾಗ ಪಾತ್ರೆಯಲ್ಲಿಯ ನೀರು, ತ್ರಿಫಲಾಕ್ವಾಥಾದಿಗಳಲ್ಲಿ ಹಾಕಿ ರಬ್ಬರ ಕೋಶವನ್ನು ಹತ್ತಿಕ್ಕಲಾಗುತ್ತಿದೆ. ಆದರಿಂದ ನೀರು ಅದರೊಳಗೆ ತುಂಬಿಕೊಳ್ಳುತ್ತದೆ. ಎರಡನೇ ಶಿರೋಭಾಗವನ್ನು ಗುದದೊಳಗೆ ಸೇರಿಸಿ ಕೋಶವನ್ನು ಪುನಃ ಹತ್ತಿಕ್ಕಲಾಗುತ್ತಿದೆ. ಇದರಿಂದ ದ್ರವವು ಮಲಾಶಯ Rectum ದಲ್ಲಿ ಪ್ರವೇಶವಾಗುತ್ತದೆ. ರೋಗಿಯನ್ನು ಎಡಪಾರ್ಶ್ವದಲ್ಲಿ ಮಲಗಿಸತಕ್ಕುದು. ಮತ್ತು ಬಲಸಕ್ಥಿಯನ್ನು ಸಂಕುಚಿತ ಮಾಡಿ ಬಸ್ತಿನೇತ್ರವನ್ನು ಗುದದಲ್ಲಿ ಸೇರಿಸತಕ್ಕುದು. ಶಾರ್ಙ್ಗಧರ ಸಂಹಿತೆಯ ಅನುಸಾರವಾಗಿ ಇದಕ್ಕೆ 'ಅನ್ಯಚರ್ಮಜಃ' ಅಥವಾ 'ರಬರಜಃ' ಎಂದು ತಿಳಿಯಬೇಕು. ಭಾವವು ಎರಡರದೂ ಒಂದೇ ಇದೆ. ಬಸ್ತಿನೇತ್ರವು ಪುರುಷರ (Adults), ಹುಡುಗರ (Infants), ಮತ್ತ ಸ್ತ್ರೀಯರ (Females) ದೆಶೆಯಿಂದ ಭಿನ್ನ ಭಿನ್ನವಾಗಿರುತ್ತದೆ. ನೀರನ್ನು ಪುನಃ ಪಾತ್ರೆಯಲ್ಲಿ ತಿರುಗಿಬರುವದನ್ನು ತಡೆಯಲಿಕ್ಕೆ ಎರಡು ಕಪಾಟ (Valve) ಗಳು ಹತ್ತಿರುತ್ತವೆ. ಅನುವಾಸನ (ಸ್ನೇಹ ಬಸ್ತಿ) ವನ್ನು (Glycerine syringe) ದಿಂದಲೂ ಕೊಡಬಹುದು.

೨೦) ಬಸ್ತಿಕೋಶ ಅಥವಾ ಬಸ್ತಿಪಾತ್ರ ( Irrigator or Douche can.) ಇದು ಒಂದು ಲೋಹಪಾತ್ರೆಯಿದೆ. ಇದರ ಮೇಲೆ ಶ್ವೇತಾಲೇಪ (Enamel) ಹತ್ತಿಕೊಂಡಿರುತ್ತದೆ. ಇದರಲ್ಲಿ ಕ್ವಾಥಾದಿ ದ್ರವವನ್ನು ತುಂಬಿ ಗೋಡೆಗೆ ಕೀಲಕ್ಕೆ ತೂಗಹಾಕಲಾಗುತ್ತಿದೆ. ಪಾತ್ರೆಯ

ಕ್ಕಭಾಗದಲ್ಲಿ ಕೊಳವಿಯ ಮುಖ (Srout) ದಿಂದ ಸಂಬದ್ಧವಾದ ರಬ್ಬರದ ನಾಳದ ದ್ವಾರದಿಂದ ದ್ರವವು ಗುದದಲ್ಲಿ ಪ್ರವೇಶವಾಗುತ್ತದೆ. ಲ್ಲಿ ಮೇಲಿನ (ಎತ್ತರದ) ಭಾಗದಲ್ಲಿಟ್ಟ ಪಾತ್ರೆಯು ಮೂತ್ರಾಶಯ (ಬಸ್ತಿಯ) ಕಾರ್ಯ ಮಾಡುತ್ತಿದೆ. ರಬ್ಬರದ ನಾಳವನ್ನು ಸ್ವಲ್ಪ ಹತ್ತಿ ಸ್ಥಲೂ ಬೇಕಾಗುತ್ತದೆ. ನೇತ್ರದ ಪೇಚು (ತಿರುಗಣಿ ಕೀಲವು) ವನ್ನು ತಿರುಗಿಸಿ ಕ್ರಿಯೆಯನ್ನು ಪೂರ್ಣಗೊಳಿಸಲಾಗುತ್ತಿದೆ.

೨೧) ಕರ್ಣಬಸ್ತಿ (ಕಿವಿಯನ್ನು ಶೋಧಿಸುವ ಪಿಚಕಾರಿಯು) (Ear syringe). ಇದರ ಮಧ್ಯಭಾಗದಲ್ಲಿ ಒಂದು ಸ್ಥೂಲವಾದ ಪಿಧಾನ (ಮುಚ್ಚಳವು Piston) ಇರುತ್ತದೆ. ಅದು ಚಕ್ರವನ್ನು ಮೇಲಕ್ಕೆ ಎಳೆಯುವದರಿಂದ ರಿಕ್ತ ಸ್ಥಾನವು (Vacuum) ಉತ್ಪನ್ನವಾಗಿ ನೇತ್ರ ದ್ವಾರದಿಂದ ಜಲವು ಮಧ್ಯಭಾಗದಲ್ಲಿ ತುಂಬಿಕೊಳ್ಳುತ್ತದೆ. ಪುನಃ ಪಿಧಾನವನ್ನು ಒತ್ತುವದರಿಂದ ದ್ರವವು ಧಾರೆಯಾಗಿ (ವೇಗ) ಹೊರಗೆ ಬರುತ್ತದೆ. ಕಿವಿಯನ್ನು ಶೋಧಿಸುವ ಸಮಯದಲ್ಲಿ ಅತಿ ಬಲವಾದ ಧಾರೆಯ ಪ್ರಯೋಗವು ಹಿತವಾದುದಿರುವದಿಲ್ಲ. ಒಮ್ಮೊಮ್ಮೆ ಇದರಿಂದ (ಜೋರಿನ ಧಾರೆಯನ್ನು ಹೊಡೆಯುವದರಿಂದ) ಕರ್ಣ ಪಟಲವು ಹರಿದು ಹೋಗುತ್ತದೆ. ಇದಕ್ಕೆ ಸ್ಥೂಲ ನೇತ್ರವೂ ಇದೆ. ಈ ಪಿಚಕಾರಿಗಳು ೨ ಮತ್ತು ೩ ಔಂಸು ಉಳ್ಳವು ದೊರೆಯುತ್ತವೆ. ಮತ್ತು ವ್ರಣವನ್ನು ತೊಳೆಯುವದರಲ್ಲಿಯೂ ಉಪಯೋಗಕ್ಕೆ ಬರುತ್ತವೆ.

೨೨) ಸೂಚೀವೇಧಬಸ್ತಿ (Injection syringe)§ ಈ ಪಿಚಕಾರಿಯು ಮಧ್ಯದಲ್ಲಿ ಕಾಜಿನದು ಮತ್ತು ಉಳಿದ ಭಾಗವು ಧಾತುಕೃತ

---

§ ಈ ಯಂತ್ರದ ಉಲ್ಲೇಖವು ಸಹ ಆಯುರ್ವೇದದಲ್ಲಿರುವದಿಲ್ಲ. ಆದರೆ ರಕ್ತ ಕಾಣುವ ವರೆಗೆ ಚರ್ಮ ದಾರಣ ಮಾಡಿ ಸೂಜಿಯ ಮೊನೆಯ ಮೇಲೆ ನಿಲ್ಲುವಷ್ಟು ದ್ರವ್ಯಗಳನ್ನು ಅಲ್ಲಿ ತುಂಬಿ ಅದರ ಮೇಲೆ ಪಟ್ಟಿಬಂಧನ ಮಾಡುತ್ತಾರೆ. ಈ ಪ್ರಯೋಗಗಳು ಅನೇಕ ಪರಂಪರಾಗತ ವೈದ್ಯರಲ್ಲಿವೆ. ಸೂಚಿಕಾಭರಣ ರಸೌಷಧಿಗಳು, ಸಿದ್ಧೌಷಧಿಗಳು, ತಾಜಾ ವನಸ್ಪತಿಯೋಗಗಳು ಉಪಯೋಗಿಸಲ್ಪಟ್ಟರೆ ಈಗಿನ ಸೂಚಿಕಾಭರಣದ ವಿಷಯವು ಗೌಣವೆನಿಸದಿರಲಾರದು.

ಇರುತ್ತದೆ. ಪ್ರಮಾಣದಲ್ಲಿ ಸಂಣದು 1 c. c 2 c, c. 5 c. c. ಇತ್ಯಾದಿಗಳನ್ನು ತಿಳಿಯಿರಿ. (Capacities) ಇದಕ್ಕೆ ಕೂಡುತ್ತದೆ. ಇದರ ಮುಂದೆ ಸೂಜಿಗಳೂ ಸೂಕ್ಷ್ಮಮುಖೀ, ಆದರೆ ಸಚ್ಛಿದ್ರವಾಗಿರುತ್ತವೆ. ಪಿಸ್ಟನ (ಪಿಧಾನ) (ಮುಚ್ಚಳ) ವನ್ನು ಮೇಲೆ ಎಳೆಯುವದರಿಂದ ಆದರಲ್ಲಿ ದ್ರವ ಪದಾರ್ಥವು ತುಂಬಿಕೊಳ್ಳುತ್ತದೆ ತ್ವಚೆಯಲ್ಲಿ ಹಿಡಿದು ಪಿಧಾನವನ್ನು ಒತ್ತುವದರಿಂದ ದ್ರವವು ಒಳಗೆ ಹೋಗುತ್ತದೆ. ಪೂರ್ಣ ವಿಧಿಯನ್ನು ತಿಳಿದವರಿಂದ ಕಲಿತುಕೊಳ್ಳಬೇಕು.

೨೩) ವ್ರಣ ಬಸ್ತಿ (Rubber bulb ) ಇದರ ಮುಖವನ್ನು ನೀರಿನಲ್ಲಿ ಹಾಕಿ ಕೋಶವನ್ನು ಹತ್ತಿಕ್ಕುವದರಿಂದ ಮತ್ತು ಪುನಃ ಸಡಿಲ ಮಾಡುವದರಿಂದ ಇದರಲ್ಲಿ ಆಶ್ಚ್ಯೋತಕ ಅಥವಾ ಬಸ್ತಿಯಂತೆ ನೀರು ತುಂಬಿಕೊಳ್ಳುತ್ತದೆ. ಮತ್ತು ಕರ್ಣ, ನೇತ್ರ ವ್ರಣಾದಿಗಳ ಶೋಧನಾರ್ಥವಾಗಿ ಕೆಲಸಕ್ಕೆ ಉಪಯೋಗವಾಗುತ್ತದೆ.

೨೪) ಉತ್ತರಬಸ್ತಿ (Urethral douche ) ಪೂಯಮೇಹ, ಮೂತ್ರ ಕೃಚ್ಛ್ರ ಇತ್ಯಾದಿಗಳಲ್ಲಿ ರೋಗಿಗಳಿಗೆ ಉತ್ತರ ಬಸ್ತಿ (ಮೂತ್ರ ಮಾರ್ಗದಲ್ಲಿ ದ್ರವ ಪ್ರವೇಶ ) ಯನ್ನು ಕೊಡಬೇಕಾಗಿದೆ. ಆದ್ದರಿಂದ ಸು. ಚಿ. ಅ. ೩೭ ರಲ್ಲಿ ಶ್ಲೋ ೧೦೦-೧೦೧ ನೋಡಿರಿ. ಮತ್ತು ವಾಗ್ಭಟ ಸೂ. ಅ. ೧೯ ರಲ್ಲಿ ಶ್ಲೋ ೭೨ರಿಂದ ೭೪ರ ವರೆಗೆ ಉತ್ತರ ಬಸ್ತಿಯ ಶಬ್ದ ನಿರುಕ್ತಿಯನ್ನು ಅರುಣ ದತ್ತನು ಈ ರೀತಿಯಾಗಿ ಮಾಡಿದ್ದಾನೆ– "ಗುದಾದುತ್ತರೇಣ ಮಾರ್ಗೇಣ ದೀಯತೇ ಇತ್ಯುತ್ತರಬಸ್ತಿಃ॥ " ಗುದದ ಮತ್ತೊಂದು ಕಡೆಗೆ ಅರ್ಥಾತ್ ಮೂತ್ರ ಮಾರ್ಗದಿಂದ ಕೊಡಲಾಗುತ್ತಿದೆ. ಆದ್ದರಿಂದ ಅದಕ್ಕೆ ಉತ್ತರಬಸ್ತಿ ಎನ್ನುತ್ತಾರೆ. ನೇತ್ರದ ಪ್ರಮಾಣಾದಿಗಳ ವರ್ಣನೆಯನ್ನು ಗ್ರಂಥಗಳಲ್ಲಿ ನೋಡಿರಿ. ಈ ಕಾಲದಲ್ಲಿ ಈ ಕಾರ್ಯವನ್ನು ಕಾಚಬಸ್ತಿ ( ಕಾಜಿನ ಸಣ್ಣ ಪಿಚಕಾರಿ ) ಯಿಂದ ಮಾಡಲಾಗುತ್ತಿದೆ. ಇದನ್ನು ದ್ರವದಿಂದ ತುಂಬಿ ಮತ್ತು ಮೇಢ್ರದ ಛಿದ್ರ (Meatus of the penis) ದಲ್ಲಿ ಸೇರಿಸಿ ಪಿಧಾನವನ್ನು ಒತ್ತುವದರಿಂದ ದ್ರವವು ಮೂತ್ರ ಮಾರ್ಗ (Urethra) ದಲ್ಲಿ ಪ್ರವೇಶವಾಗುತ್ತದೆ. ಪಿಚಕಾರಿಯನ್ನು ಕೊಡುವ ಸಮಯದಲ್ಲಿ ಶಿಶ್ನ ಮುಂಡವನ್ನು ಗಟ್ಟಿಯಾಗಿ ಹಿಡಿದಿರತಕ್ಕದು.

ಸ್ವಲ್ಪ ಪರೀಕ್ಷೆಯ ನಂತರ ಪಿಚಕಾರಿಯನ್ನು ಸರಿಸುವದರಿಂದ ದ್ರವವು ಹೊರಗೆ ಬರುತ್ತದೆ. ಇದೇ ರೀತಿಯಾಗಿ ಎಷ್ಟೋಸಾರೆ ಮಾಡುವದರಿಂದ ಉತ್ತರ ಬಸ್ತಿಯ ಕಾರ್ಯವು ಪೂರ್ತಿಯಾಗುತ್ತಿದೆ.

೨೫) ಅಶ್ಮರೀ ತಾಲಕಯಂತ್ರ (Lithotomy scoop). ಇದು ಅಶ್ಮರಿಯನ್ನು ತೆಗೆಯುವಯಂತ್ರವಾಗಿದೆ. ಯಾವದೋ ಕಾರಣದಿಂದ ಇದನ್ನು ಮೊದಲು ಕೊಡುವದಾಗಲಿಲ್ಲ.

೨೬) ಶಸ್ತ್ರಕೋಶ (Instruments bag) ಯಂತ್ರ ಶಸ್ತ್ರಾದಿಗಳನ್ನು ಮಾಡಿಸಿ ಎಲ್ಲಿ ಮತ್ತು ಯಾವ ಪ್ರಕಾರವಾಗಿ ಸುರಕ್ಷಿತವಾಗಿಡತಕ್ಕದು? ಶ್ರೀ ವಾಗ್ಭಟರು ಶಸ್ತ್ರಕೋಶದ ಉಲ್ಲೇಖವನ್ನು ಮಾಡಿ ಚನ್ನಾಗಿ ಈ ಭಾವವನ್ನು ಪ್ರದರ್ಶಿಸಿದ್ದಾರೆ. ಯಥಾ– "ಸ್ಯಾನ್ನವಾಂಗುಲ ವಿಸ್ತಾರಃ ಸುಘನೋದ್ವಾದ ಶಾಂಗುಲಃ। ಕ್ಷೌಮಪತ್ರೋರ್ಣ ಕೌಶೇಯದುಕೂಲ ಮೃದುಚರ್ಮಜಃ ॥೩೫॥ ವಿನ್ಯಸ್ತಪಾಶಃ ಸುಸ್ಯೂತಃ ಸಾಂತರೋರ್ಣಸ್ಥ ಶಸ್ತ್ರಕಃ। ಶಲಾಕಾವಿಹಿತಾಸ್ಯಶ್ಚ ಶಸ್ತ್ರಕೋಶಃ ಸುಸಂಚಯಃ ॥೩೬॥" (ಅ. ಹೃ. ಸೂ. ಅ. ೨೬) ೯ ಅಂಗುಲ ಅಗಲ, ೧೨ ಅಂಗುಲ ಉದ್ದವಾಗಿ ಘನವಾದ (ದಪ್ಪ ಅಥವಾ ಸ್ಥೂಲ), ರೇಶಿಮೆ, ಮೃದುಪತ್ರ, ಉಣ್ಣೆ, ಚರ್ಮಾದಿ ಕೃತ, ಮತ್ತು ಪಾಶದಿಂದ ಯುಕ್ತ, ಚನ್ನಾದ ಹೊಲಿಗೆಯನ್ನು ಹಾಕಿದ್ದು ಒಳಗಡೆಗೆ ಉಣ್ಣೆಯ ಗಾದಿಗಳನ್ನು ಶಸ್ತ್ರಗಳನ್ನು ಇಡಲಿಕ್ಕೆ ಹಾಕಿರಬೇಕು. ಮತ್ತು ಅವುಗಳ ಮುಖಗಳು ಶಲಾಕೆಗಳನ್ನು ಹಚ್ಚಿ ಮುಚ್ಚಲಿಕ್ಕೆ ಬರುವಂಥವಾಗಿರಬೇಕು. ಹೀಗೆ ಸುಸಂಚಯ (ಸುಂದರವಾದ ಶಸ್ತ್ರ ಸಂಚಯದಿಂದ ಯುಕ್ತ)ವಾದ ಶಸ್ತ್ರಕೋಶವನ್ನು ಮಾಡಿಸತಕ್ಕದು.

೨೭) ಯಂತ್ರಶಸ್ತ್ರ ಸುಸಂಚಯವು–ಕೆಲವು ಪ್ರಾಯೋಗಿಕ ಯಂತ್ರ ಶಸ್ತ್ರಗಳ ಸಂಚಯವನ್ನು ಪುಸ್ತಕದ ಕೊನೆಯಲ್ಲಿ ತೋರಿಸಲಾಗಿದೆ ಪಾಠಕರು ಅದನ್ನು ಗುರುತಿಸುವ ಪ್ರಯತ್ನವನ್ನು ಮಾಡತಕ್ಕದ್ದು. ಮತ್ತು ಯಾವ ಯಂತ್ರ ಅಥವಾ ಶಸ್ತ್ರವನ್ನು ಯಾವಹೆಸರುಳ್ಳದ್ದನ್ನು ಯಾವ ಕಾರ್ಯದಲ್ಲಿ ಉಪಯೋಗಿಸುತ್ತಾರೆ (ವ್ಯವಹರಿಸುತ್ತಾರೆ) ಎಂಬುದೂ ತಿಳಿದುಕೊಳ್ಳತಕ್ಕದ್ದಾಗಿದೆ.

೨೮) ಯಂತ್ರ ಶೋಧನವಿಧಿಯು (Purification or sterilization of instruments) ಯಂತ್ರ ಹಾಗೂ ಶಸ್ತ್ರಗಳನ್ನು ಸದೈವ

ನಿರ್ಮಲ ಸ್ವಚ್ಛ ಮತ್ತು ಶುದ್ಧ (Sterilised) ವಾಗಿಡತಕ್ಕದು. ಒಬ್ಬ ರೋಗಿಯ ಮೇಲೆ ಯಾವದಾದರೂ ಯಂತ್ರ ಅಥವಾ ಶಸ್ತ್ರವನ್ನು ಉಪ ಯೋಗ ಮಾಡಿ ಎರಡನೇ ರೋಗಿಯ ಮೇಲೆ ಶಸ್ತ್ರಗಳ ಶೋಧನೆಯಿಲ್ಲದೇ ಪ್ರಯೋಗವನ್ನು ಮಾಡಬಾರದು. ಇಲ್ಲದಿದ್ದರೆ ಸಂಕ್ರಮ (Infection) ಸಂಭವವಿದೆ, ಶೋಧನವನ್ನು ಯಥಾಯೋಗ್ಯ (ಚನ್ನಾಗಿ) ಮಾಡತಕ್ಕದ್ದು. ಹೇಗೆ ತಾಪ ಮಾಪಕವನ್ನು ಕೇವಲ ನೀರಿನಿಂದ, ಬಸ್ತಿಯಂತ್ರಾದಿಗಳನ್ನು ಬಿಸಿಯಾದ ರಸಾಂಜನ ನೀರಿನಲ್ಲಿ, ಯಂತ್ರವನ್ನು ನಿಂಬಕ್ವಾಥ, ಸುತಪ್ತ ಜಲ, ಪಾರದ ವಿಲಯನ (Mecrury Lotion), ತ್ರಿಫಲಾ ಅಥವಾ ವಚಾಕ್ವಾಥ ಇತ್ಯಾದಿಯಲ್ಲಿ ಮತ್ತು ಶಸ್ತ್ರಗಳನ್ನು ಉಕ್ತದ್ರವದಲ್ಲಿ ಅಥವಾ ಕೇವಲ ನೀರಿನಲ್ಲಿ ಆದರೂ ಶೋಧಿಸುವದರಿಂದ ಶುದ್ಧವಾಗುತ್ತವೆ. ಮದ್ಯ ಸಾರ (Methylated spirit) ದಲ್ಲಿ ಮುಳುಗಿಸಿಯೂ ಯಂತ್ರ ಹಾಗೂ ಶಸ್ತ್ರಗಳು ಸಾಧಾರಣತಯಾ ಶುದ್ಧವಾಗುತ್ತಿವೆ. ಆದರೆ ಬೃಹತ್ ಶಸ್ತ್ರಕರ್ಮ Major operations ದ ದೆಶೆಯಿಂದ ಅವುಗಳನ್ನು ಬಾಷ್ಪಯಂತ್ರ ಶೋಧಕ (Steam steriliser) ದ್ವಾರಾ ಅಥವಾ ಶೋಧನ ಕಟಾಹ (Sterilising kettle) ಇತ್ಯಾದಿಗಳ ದ್ವಾರಾ ಶುದ್ಧ ಮಾಡತಕ್ಕದು.

೨೯) ಸಂಜ್ಞಾನಾಶ (Aneasthesia) ಸಾಧಾರಣ ಅಥವಾ ಲಘು ಶಸ್ತ್ರಕರ್ಮ (Minor operations)ವಂತೂ ರೋಗಿಯನ್ನು ಮೂರ್ಛಿತ ಮಾಡಿಸದೇ ಆಗುತ್ತವೆ (ಮಾಡಲಿಕ್ಕೆ ಬರುತ್ತದೆ.) ಅವುಗಳಲ್ಲಿಯೂ ಕೆಲವೇಳೆ ಸಂಜ್ಞಾನಾಶವು ಆವಶ್ಯಕವಾಗಿರುತ್ತದೆ. ಪರಂತು ಬೃಹತ್ ಶಸ್ತ್ರ ಕರ್ಮಗಳಲ್ಲಿಯಂತೂ ಸಂಜ್ಞಾನಾಶವು ಆವಶ್ಯಕವಾಗಿದೆ (ಅನಿ ವಾರ್ಯವಾಗಿದೆ.) ಭೋಜ ರಾಜನ ಕಾಲದಲ್ಲಿ ಶಿರೋಗತ ಶಸ್ತ್ರ ಕರ್ಮ ಗಳ ವರ್ಣನೆಯಿದೆ. ಅದರಲ್ಲಿ ಸಂಜ್ಞಾನಾಶಾರ್ಥವಾಗಿ ಸಮ್ಮೋಹನೀ ಮತ್ತು ಸಂಜ್ಞೋತ್ಪಾದನಾರ್ಥವಾಗಿ ಸಂಜೀವನೀ ಔಷಧಿಗಳ ಲೇಖವಿದೆ. ಪುನಃ ಸು. ಸೂ. ಅ. ೧೭ರಲ್ಲಿ "ಮದ್ಯಪಂ ಪಾಯಯೇನ್ಮದ್ಯಂ ತೀಕ್ಷ್ಣಂ ಯೋವೇದನಾ ಸಹಃ। .... ಮತ್ತಃ ಶಸ್ತ್ರಂ ನಬುಧ್ಯತೇ ॥೧೩॥ " ಈ ವಚನವನ್ನು ಸ್ಪಷ್ಟಮಾಡಿದ್ದು ಹೀಗಿದೆ. ಪ್ರಾಚೀನ ಕಾಲದಲ್ಲಿ ರೋಗಿಯು ಶಸ್ತ್ರ ಕರ್ಮದ ವೇದನೆಯನ್ನು ಸಹಿಸದಿದ್ದರೆ, ತೀಕ್ಷ್ಣ ಮದ್ಯ (Strong

wine) ಕುಡಿಸುತ್ತಿದ್ದರು. ಆದರಿಂದ ಮದ ಉತ್ಪನ್ನವಾಗಿ ರೋಗಿಯಲ್ಲಿ ಪೀಡೆಯನ್ನು ಸಹಿಸುವಶಕ್ತಿಯು ಬರುತ್ತಿತ್ತು. ಸುರಾ (ಸೆರೆ) ವನ್ನು ಕುಡಿದ ಸ್ವಲ್ಪ ಹೊತ್ತಿನ ನಂತರ ಮೂರ್ದ್ನಿಯ ಮೇಲೆ (ಮಿದುಳಿನ ಮೇಲೆ) ಪ್ರಭಾವವು ಬೀಳುತ್ತದೆ. ಆದರಿಂದ ರೋಗಿಯು ಮೂರ್ಛಿತನಾಗುತ್ತಾನೆ. ಸುಶ್ರುತೋಕ್ತ ತೀಕ್ಷ್ಣ ಮದ್ಯವನ್ನು ಕುಡಿಸುವದೂ ಮತ್ತು ಈಗ ತೀಕ್ಷ್ಣ ಮದ್ಯವನ್ನು ಮೂಸಿಸುವದೂ- ಇವುಗಳು ಎರಡೂ ಅವಶ್ಯ ಸಾಮಾನ್ಯ ವಾಗಿವೆ. ಮೂರ್ಧಾ (ಮಿದುಳು) ದ ಮೇಲೆ ಪ್ರಭಾವವು ಎರಡೂ ಅವಸ್ಥೆಗಳಲ್ಲಿ ಆಗುತ್ತದೆ. ಪ್ರಾಚೀನ ಕಾಲದಲ್ಲಿ ವಿಜಯಾ (ಭಾಂಗು, ಗಾಂಜಾ) ಮತ್ತು ಧತ್ತೂರ (ಮದುಗುಣಿಕೆ) ಯನ್ನೂ ಕಾರ್ಯದ ದೆಶೆಯಿಂದ ಉಪಯೋಗಿಸುತ್ತಿದ್ದರು.

೩೦) ಯಂತ್ರ ಶಸ್ತ್ರ ಶಿಕ್ಷಾ (Training in the use of instruments)- ಏತದರ್ಥವಾಗಿ ಸುಶ್ರುತರು ಯೋಗ್ಯಾಸೂತ್ರೀಯ ವೆಂಬ ಅಧ್ಯಾಯವನ್ನು ರಚಿಸಿದರು. ಆದರೆ ನಮಗೆ ಇದರಿಂದ ಪೂರ್ಣ ಶಿಕ್ಷೆಯು ದೊರೆಯಲಾರದು. ಎಲ್ಲಿಯವರೆಗೆ ನಾವು ಯಾವನಾದರೊಬ್ಬ ಶಸ್ತ್ರಕರ್ಮದಲ್ಲಿ ದಕ್ಷನಾದ ಧನ್ವಂತರಿ (Surgeon) ಯಿಂದ ಶಿಕ್ಷೆಯನ್ನು ಹೊಂದಲಾರೆವೋ ಅಲ್ಲಿಯವರೆಗೆ ನಮಗೆ ಜ್ಞಾನವಾಗಲಾರದು. ಶಲ್ಯ ವಿಜ್ಞಾನದ ಉನ್ನತಿಗಾಗಿ ನಾವು ಅವಶ್ಯವಾಗಿ ಶಸ್ತ್ರಕರ್ಮ ಕುಶಲನಾದ ಡಾಕ್ಟರನಿಂದ ಅಭ್ಯಾಸವನ್ನು ಹೊಂದಬಲ್ಲೆವು ಶಿಕ್ಷೆಯನ್ನು ಹೊಂದುವದರಲ್ಲಿ ಯಾವ ತರಹದ ಸಂಕೋಚ ಭಾವವನ್ನು ಮಾಡಬಾರದು. ಚರಕ ಮಹರ್ಷಿಗಳು ವಿಮಾನ ಸ್ಥಾನ ಅ. ೮ ರಲ್ಲಿ ಹೀಗೆ ಬರೆದಿದ್ದಾರೆ — "ಕೃತ್ಸ್ನೋಹಿ ಲೋಕೆ ಬುದ್ಧಿಮತಾಮಾಚಾರ್ಯಃ ಶತ್ರುಶ್ಚಾಬುದ್ಧಿಮತಾಮ್ "ಇತಿ"

## ಪ್ರಶ್ನ ಸೂಚಿಕೆ ( Questions )

೧) ಘಟೀ, ಶೃಂಗ, ಅಲಾಬುಗಳ ಪರಸ್ಪರ ಭೇದವನ್ನು ವಿವರಿಸಿ ಅವುಗಳ ಪ್ರಯೋಗ ವಿಧಿಯನ್ನು ಬರೆಯಿರಿ.

೨)ಸ್ತನ್ಯಾಚೂಷಕದ ಆಕೃತಿಯನ್ನು ಚಿತ್ರಿಸಿ ಉಪಯೋಗ ಪ್ರಕಾರವನ್ನು ವಿಶದಿಸಿರಿ.

೩) ಬಸ್ತಿಯಂತ್ರವೆಂದರೇನು? ಅದು ಎಷ್ಟು ವಿಧವಾಗಿದೆ? ಅದರ ನಿರ್ಮಾಣ ಪ್ರಕಾರವನ್ನು ಶಾಸ್ತ್ರ ರೀತಿಯಿಂದ ನಿರ್ದೇಶಿಸಿರಿ. ಬಸ್ತಿ ಪ್ರಯೋಗವನ್ನು ಮಾಡತಕ್ಕದ್ದು ಹೇಗೆ? ಚನ್ನಾಗಿ ನಿರೂಪಿಸಿರಿ. ಅರ್ವಾಚೀನ ಬಸ್ತಿಯಂತ್ರಗಳನ್ನು ಚಿತ್ರ ಪ್ರದರ್ಶನ ಪೂರ್ವಕವಾಗಿ ವರ್ಣಿಸಿರಿ.

೪) ಉರಃ (ಎದೆಯು) ಯಾವ ಯಂತ್ರದಿಂದ ಪರೀಕ್ಷಿಸಲ್ಪಡುತ್ತದೆ. ಅದರ ಆಕೃತಿ, ಪ್ರಯೋಗ, ಪ್ರಕಾರ ಇವುಗಳನ್ನು ಬರೆಯಿರಿ. ಭ್ರೂಣ-ಹೃತ್ಪಿಂಡ ಪರೀಕ್ಷೆಯ ವಿಧಿಯನ್ನೂ ವಿವರಿಸಿರಿ.

೫) ಜ್ವರಉಳ್ಳವರ ತಾಪಜ್ಞಾನಾರ್ಥವಾಗಿ ಯಂತ್ರಗಳನ್ನು ಉಪಯೋಗಿಸಬಹುದೇ, ಬೇಡವೇ ? ಆಯುರ್ವೇದದಲ್ಲಿ ಇಂಥ ಯಂತ್ರಗಳ ಉಲ್ಲೇಖವಿದೆಯೇ, ಇಲ್ಲವೇ? ಇದಕ್ಕೆ ಪರಿಹಾರವೇನು?

೬) ಶುದ್ಧಾಶುದ್ಧ ಹಾಲಿನ ನಿಶ್ಚಯಾರ್ಥವಾಗಿ, ಮಧು-ಉದಕಮೇಹ ಜ್ಞಾನಾರ್ಥವಾಗಿ ಯಂತ್ರಗಳ ಅವಶ್ಯಕತೆ ಇದೆಯೇ? ಇಲ್ಲವೇ ? ಅನೇಕ ಯಂತ್ರಗಳ ಪರಿಜ್ಞಾನವುಳ್ಳ ಆಯುರ್ವೇದಕಾರರು ಇದಕ್ಕೆ ಯಂತ್ರಗಳ ಆವಶ್ಯಕತೆ ಇದೆ ಎಂದು ಏಕೆ ಕಂಡುಹಿಡಿಯಲಿಲ್ಲ?

೭) ನಾಸಾದರ್ಶಕಯಂತ್ರವು ಎಂಥದಿದೆ. ಅದನ್ನು ಹೇಗೆ ಉಪಯೋಗಿಸಲಾಗುವುದು.

೮) ಶಸ್ತ್ರಕರ್ಮ ಸೌಕರ್ಯಾರ್ಥವಾಗಿ ಸಂಜ್ಞಾನಾಶದ ಉಪಾಯಗಳೇನು ?

೯) ಯಂತ್ರಶಸ್ತ್ರಗಳ ಶೋಧನ ಪ್ರಕಾರವು ಹೇಗಿದೆ? ಬಾಷ್ಪಶೋಧನ ಯಂತ್ರವು ಯಾವದು? ವಿವರಿಸಿರಿ. ಶಸ್ತ್ರ ಕೋಶದ ನಿರ್ಮಾಣ ಪ್ರಕಾರವನ್ನು ಬರೆಯಿರಿ.

೧೦) ಕೆಳಗೆ ಬರೆದ ಯಂತ್ರಗಳ ಸಾಮಾನ್ಯ ಪರಿಚಯವನ್ನು ಕೊಡಿರಿ.

ಯೋನಿವ್ರಣೇಕ್ಷಣ ಯಂತ್ರವು. ನಾಸಾರ್ಬುದೀ ಶಲಾಕೆಯು. ಮೂತ್ರ ಬಸ್ತಿಯಂತ್ರವು. ಏಷಣೀ. ಅರ್ಶೋಯಂತ್ರವು. [illegible] ಯಂತ್ರವು, ಸರ್ಪಫಣೀ ಶಲಾಕೆಯು, ಸೂಚಿಗಳು.

ಇಲ್ಲಿಗೆ ಯಂತ್ರ ಶಸ್ತ್ರ ಪರಿಚಯದ ಮಿಶ್ರಿತ ಪ್ರಕರಣವೆಂಬ [illegible] ಅಧ್ಯಾಯವು ಬುದ್ಧ್ಯನುಸಾರವಾಗಿ ಮುಗಿದುದು. ಶ್ರೀ ಧನ್ವಂತರಿಯ ಚರಣಗಳಿಗೆ ಸಮರ್ಪಿಸುವೆ.



ಆವಶ್ಯಕ ಸೂಚನೆ:— ಅಧ್ಯಾಪಕರು ಈ ವಿಷಯವನ್ನು ಓದಿಸುವ ಸಮಯದಲ್ಲಿ ಈ ಪುಸ್ತಕದಲ್ಲಿ ಪ್ರದರ್ಶಿತ ಯಂತ್ರ ಶಸ್ತ್ರಗಳನ್ನು ಏಕತ್ರ ಮಾಡಿ ಯಥಾ ಸಂಭವ ಓದುಗರಿಗೆ ತೋರಿಸತಕ್ಕದ್ದು. ಮತ್ತು ಪ್ರತ್ಯಕ್ಷ ವಾಗಿ ಪ್ರಯೋಗಗಳನ್ನು ತಿಳಿಸತಕ್ಕದ್ದು. ಇದೇ ರೀತಿಯಾಗಿ ಪರೀಕ್ಷಕರೂ ಸಹ ಶಲ್ಯ ಶಲಾಕ್ಯದ ಪ್ರಶ್ನ ಪತ್ರಿಕೆಗಳಲ್ಲಿ ತತ್ಸಂಬಂಧಿಯ ಪ್ರಶ್ನಗಳನ್ನು ಕೇಳತಕ್ಕದ್ದು. ಮತ್ತು ಮೌಖಿಕ ಪರೀಕ್ಷೆಯಲ್ಲಿಯೂ ಪರೀಕ್ಷಕ ಮಹಾ ಶಯರು ಕೆಲವು ಯಂತ್ರಶಸ್ತ್ರಗಳನ್ನು ಪ್ರದರ್ಶಿಸಿ ಅವುಗಳ ಹೆಸರು, ಉಪ ಯೋಗ, ಪ್ರಕಾರ ಇತ್ಯಾದಿಗಳನ್ನು ಕೇಳತಕ್ಕದ್ದು. ಆವಾಗಲೇ ಆಯು ರ್ವೇದೀಯ ಛಾತ್ರ ವರ್ಗವೂ ಶಲ್ಯ ವಿಷಯದ ಮೇಲೆ ಲಕ್ಷ್ಯವನ್ನು ಕೊಡ ಬಹುದು. ಪ್ರತ್ಯೇಕ ಆಯುರ್ವೇದೀಯ ಸಂಸ್ಥೆಗಳಲ್ಲಿ ಒಂದು ಧನ್ವಂತರಿ ವಿಭಾಗವು (Dhanwantari ward) ಇರತಕ್ಕುದು. ಬೇರೆ ಬೇರ ಶರೀರಾವಯವಗಳಿಗೆ ತಕ್ಕಂತೆ ಕಾಲಕ್ಕನುಸರಿಸಿ ಯಂತ್ರಗಳನ್ನು ರಚಿಸಿ ಕೊಳ್ಳುವ ಅಧಿಕಾರವನ್ನು ಶಾಸ್ತ್ರಕಾರರು ಕೊಟ್ಟಿರುವರೋ ಇಲ್ಲವೋ ?

# I

ವೈದ್ಯಪತಿ ಶ್ರೀಮದ್ವಾಗ್ಭಟಾಚಾರ್ಯರು ತಮ್ಮ ಅಷ್ಟಾಂಗ ಹೃದಯ ಎಂಬ ಗ್ರಂಥದಲ್ಲಿ ರೋಗಗಳ ಸಾಧ್ಯಾಸಾಧ್ಯ ವಿಚಾರಗಳನ್ನು ವರ್ಣಿಸುತ್ತಿರುವಾಗ, ಅವುಗಳನ್ನು ನಾಲ್ಕುವಿಧವಾಗಿ ವಿಭಾಗಿಸಿರುವರು. ಅವು ಯಾವವೆಂದರೆ:— ೧) ಸುಖಸಾಧ್ಯವ್ಯಾಧಿಗಳು ೨) ಕಷ್ಟಸಾಧ್ಯವ್ಯಾಧಿಗಳು ೩) ಯಾಪ್ಯವ್ಯಾಧಿಗಳು ೪) ಅನುಪಕ್ರಮವ್ಯಾಧಿಗಳು. ಈ ರೀತಿಯಾಗಿ ಚಿಕಿತ್ಸಾ ಸೌಕರ್ಯಾರ್ಥವಾಗಿ ರೋಗಗಳ ವಿಭಾಗಗಳನ್ನು ಮಾಡಿರುವರು.

ಅದನ್ನೇ ಅವರು ಕಷ್ಟಸಾಧ್ಯವ್ಯಾಧಿಗಳ ವಿಷಯುಕ್ಕೆ ಹೇಳುವಾಗ ಬಹಳೇ ಪ್ರಯಾಸ ಮಾಡೋಣದರಿಂದ ಕ್ವಚಿತ್ ಸಿದ್ಧಿಯಾಗಬಹುದೆಂಬ ಅಭಿಪ್ರಾಯವನ್ನು ಸ್ಪಷ್ಟಪಡಿಸಿರುವರು.

ಶ್ರೀಮದ್ವಾಗ್ಭಟಾಚಾರ್ಯರ ಮತಾನುಸಾರವಾಗಿ ಶಸ್ತ್ರಕರ್ಮ ಸಾಧ್ಯ ವ್ಯಾಧಿಗಳು ಕಷ್ಟ ಸಾಧ್ಯವಾಧಿಗಳಲ್ಲಿ ಸಮಾವೇಶವಾಗುವವು.

ಅದೇ ಅರ್ಥವನ್ನು ಅವರು ಈ ಕೆಳಗೆ ಬರೆದಂತೆಸ್ಪಷ್ಟೀಕರಿಸಿರುವರು:-

**ಶಸ್ತ್ರಾಧಿ ಸಾಧನಃ ಕೃಚ್ಛ್ರಃ ಸಂಕರೆ ಚತತೋ ಗಡಃ**

(ಅ. ಹೃ. ಸೂ. ಸ್ಥಾ. ಅ೧. ಸೂ. ೩೨)

ಶಸ್ತ್ರದಾಹಾದಿಕರ್ಮಗಳಿಂದ ಸಾಧ್ಯವಾಗತಕ್ಕ ರೋಗಗಳು ಹಾಗೂ ಉಪದ್ರವಗಳಿಂದ ಕೂಡಿದ ವ್ಯಾಧಿಗಳು ಕಷ್ಟಸಾಧ್ಯವ್ಯಾಧಿಗಳಲ್ಲಿ ಅಂತರ್ಭಾವವಾಗುವವು.

ಅಂದರೆ ಶಸ್ತ್ರ ಚಿಕಿತ್ಸಾ ಮಾಡೋಣದರಿಂದ ಖಂಡಿತವಾಗಿ ಯಶಸ್ಸು ದೊರೆಯುವದೆಂದು ನಂಬಲು ಸಾಧ್ಯವಿಲ್ಲ.

ಕ್ವಚಿತ್ ದೈವವಶಾತ್ ಇಲ್ಲವೆ ಆಯುಷ್ಯದ ಶೇಷತ್ವಾತ್ ರೋಗಿಯು ಬದುಕಬಹದು.

ಇದಲ್ಲದೆ ನಮ್ಮ ಶಾಸ್ತ್ರಕಾರರು ಶಸ್ತ್ರಕರ್ಮದ ವಿಷಯಕ್ಕೆ ವಿಶೇಷ ಅಭಿಮಾನತಾಳಿದ್ದು ಎಲ್ಲಿಯೂ ಕಂಡುಬರುವದಿಲ್ಲ; ಶಸ್ತ್ರಸಾಧ್ಯವ್ಯಾಧಿಗಳಾದರೂ ಕೆಲವೇ ಇರುವವು.

ಶಲ್ಯಶಾಲಾಕ್ಯತಂತ್ರ ಕೋವಿದರಾದ ಶ್ರೀಮತ್ ಸುಶ್ರುತಾಚಾರ್ಯರೂ ಕೂಡ ವೃದ್ಧರು, ಬಾಲರು, ಭೀರುಗಳು, ಗರ್ಭಿಣಿಯರು,

ಸೂತಿಕಾ ಸ್ತ್ರೀಯರು, ಕೃಶರು, ದುರ್ಬಲಾದಿಪುರುಷರು, ಶಸ್ತ್ರಕರ್ಮಕ್ಕೆ ಅಯೋಗ್ಯರಾದ ಪುರುಷರೆಂದು ಹೇಳಿರುವರು.

ಹೀಗೆ ಶಸ್ತ್ರಕ್ರಿಯೆಗೆ ಅನರ್ಹರಾದ ಪುರುಷರನ್ನು ಕೂಡಾ ಕಾಯ ಚಿಕಿತ್ಸಾ ಪದ್ಧತಿಯಂತೆ ಉಪಚಾರ ಮಾಡುವದರಿಂದ ಗುಣವಾದ ಅನೇಕ ಉದಾಹರಣೆಗಳುಂಟು. ಮತ್ತು ಅವರು ನಿರೋಗಿಯಾಗಿ ದೀರ್ಘಕಾಲದ ವರೆಗೆ ಬಾಳಿದ ಉದಾಹರಣೆಗಳೂ ಇರುವವು.

ಆದಕಾರಣ ಶಸ್ತ್ರಕರ್ಮಕ್ಕಿಂತ ಕಾಯಾದಿ ಚಿಕಿತ್ಸೆಗಳೇ ಹೆಚ್ಚಿನವು ಗಳೆಂತ ಸ್ಪಷ್ಟವಾಗುತ್ತದೆ.

ಈ ಎಲ್ಲ ಶಾಸ್ತ್ರೀಯ ಆಧಾರಗಳಮೂಲಕ ಶಸ್ತ್ರಕರ್ಮಕ್ಕೆ ಅಷ್ಟೊಂದು ಪ್ರಾಶಸ್ತ್ಯ ಕೊಡುವದು ಯೋಗ್ಯವೆನಿಸುವದಿಲ್ಲ.

ಕಾರಣ ಶಸ್ತ್ರಕರ್ಮವನ್ನು ಗೌಣಪಕ್ಷದಲ್ಲಿಯೇ ಗಣನೆ ಮಾಡುವದು ಯೋಗ್ಯವೆಂದು ತೋರುತ್ತದೆ.

ಅದನ್ನೇ ಭೈಷಜ್ಯರತ್ನಾವಲಿಕಾರರು ಈ ರೀತಿ ಹೇಳಿರುವರು:—

ಅಧಮಃ ಶಸ್ತ್ರದಾಹಾಭ್ಯಾಂ ................ ||

ಅಂದರೆ ಶಸ್ತ್ರಕರ್ಮ ದಾಹಕರ್ಮಗಳು ತುಚ್ಛವಾದ (ಅಧಮ) ಕ್ರಿಯಾಕರ್ಮಗಳೆಂದು ಹೇಳಿದ್ದು ಯಥಾ ಯೋಗ್ಯವೇ ಆಗಿದೆ.

ವೈದ್ಯಪತಿ ಶ್ರೀ ಮದ್ವಾಗ್ಭಟಾಚಾರ್ಯರು ಶಸ್ತ್ರಕರ್ಮದ ಗೌಣತ್ವದ ನಿದರ್ಶನವಾಗಿ ಅಷ್ಟಾಂಗಹೃದಯದ ಸೂತ್ರಸ್ಥಾನದ ಮೂವತ್ತನೇ ಅಧ್ಯಾಯದ ಸೂತ್ರ ೧-೨ ರಲ್ಲಿ ಈ ಕೆಳಗೆ ಬರೆದಂತೆ ವಿವರಿಸರುವರು:—

ಸರ್ವಶಸ್ತ್ರಾನುಶಸ್ತ್ರಾಣಾಂ ಕ್ಷಾರಃ ಶ್ರೇಷ್ಠೋ ಬಹೂನಿಯತ್|
ಛೇದ್ಯಭೇದ್ಯಾದಿ ಕರ್ಮಾಣಿ ಕುರುತೇ ವಿಷಮೇಷ್ವಪಿ ||೧||
ದುಃಖಾವಚಾರ್ಯ ಶಸ್ತ್ರೇಷು ತೇನ ಸಿದ್ಧಿಮಯಾತ್ಸು ಚ|
ಅತಿ ಕೃಚ್ಛ್ರೇಷು ರೋಗೇಷು ಯಚ್ಚ ಪಾನೇಽಪಿ ಯುಜ್ಯತೆ ||

ಸರ್ವಪ್ರಕಾರದ ಶಸ್ತ್ರಗಳು, ಅನುಶಸ್ತ್ರಗಳು, ಇವುಗಳಿಗಿಂತ ಕ್ಷಾರ ಕರ್ಮವು ಹೆಚ್ಚು ಶ್ರೇಷ್ಠವಾದದ್ದು. ಯಾಕಂದರೆ ಕ್ಷಾರ ಪ್ರಯೋಗದಿಂದ ಛೇದ್ಯ ಭೇದ್ಯಾದಿ ಅನೇಕ ಕರ್ಮಗಳನ್ನು ಮಾಡಲು ಸಾಧ್ಯವಿದೆ. ವಿಷಮ ದೇಹದಲ್ಲಿ ಇಲ್ಲವೆ ವಿಷಮ ರೋಗಗಳಲ್ಲಿ ಮತ್ತು ಯಾವ ಸ್ಥಾನದಲ್ಲಿ ಶಸ್ತ್ರ

ಕ್ರಿಯೆಯನ್ನು ಮಾಡಲು ಅಸಾಧ್ಯ ಪರಿಸ್ಥಿತಿಯಿರುವದೋ, ಆ ಸ್ಥಾನದಲ್ಲಿ ಕ್ಷಾರ ಯೋಗವನ್ನು ಮಾಡಿದಲ್ಲಿ ಖಂಡಿತವಾಗಿ ಆ ಚಿಕಿತ್ಸೆಯು ಯಶಸ್ವಿಯಾಗುವದು. ಹಾಗೂ ಶಸ್ತ್ರಕ್ರಿಯೆಯನ್ನು ಮಾಡಿದರೂ ಕೂಡ ಯಾವ ರೋಗಗಳು ಉಪಶಮನವಾಗುವದಿಲ್ಲವೋ ಮತ್ತು ಅತಿ ದುಃಸಾಧ್ಯವಾದ ರೋಗಗಳಲ್ಲಿಯೂ ಕೂಡಾ ಕ್ಷಾರ ವಿಧಿಯಂತೆ ಚಿಕಿತ್ಸಾ ಮಾಡೋಣದರಿಂದ ಆ ರೋಗಗಳು ನಿಃಸಂಶಯವಾಗಿ ನಾಶವಾಗುವವು. ಇದಲ್ಲದೆ ಕ್ಷಾರವನ್ನು ಔಷಧದಂತೆ ವ್ಯಾಖ್ಯಾನುಸಾರವಾಗಿ ಪಾನಾರ್ಥವಾಗಿಯೂ, ಲೇಪನಾರ್ಥವಾಗಿಯೂ ಉಪಯೋಗಿಸಲು ಬರುವದು.

ಆದರೆ ಅದೇ ರೀತಿ ಶಸ್ತ್ರಕರ್ಮಗಳನ್ನು ಅನೇಕ ವಿಧವಾಗಿ ಮಾಡಲು ಬರುವದಿಲ್ಲ; ಇದಲ್ಲದೆ ಎಷ್ಟೋ ರೋಗಗಳು ಶಸ್ತ್ರ ಚಿಕಿತ್ಸೆಗೆ ಅಸಾಧ್ಯವಾದವುಗಳೆಂದು ಶಾಸ್ತ್ರಕಾರರು ಹೇಳಿರುತ್ತಾರೆ.

ಅಷ್ಟಾಂಗ ಹೃದಯ ಉದರ ಚಿಕಿತ್ಸಾ ಅಧ್ಯಾಯ ೧೫ ಸೂತ್ರ ೧೦೭ ರಲ್ಲಿ ಈ ರೀತಿ ಹೇಳಿರುವರು:—

ಇತ್ಯೌಷಧೈರಪ್ರಶಮೆ ತ್ರಿಷು ಬದ್ಧೋದರಾದಿಷು ॥
ಪ್ರಯುಂಜೀತ ಭಿಷಕ್ ಶಸ್ತ್ರಮಾರ್ತಬಂಧು ನೃಪಾರ್ಥಿತಃ ॥

ಅಭಿಪ್ರಾಯವೇನೆಂದರೆ, ಉದರ ರೋಗಕ್ಕೆ ಶಾಸ್ತ್ರಕಾರರು ಈ ಮೊದಲು ಅನೇಕ ಸಿದ್ಧ ಯೋಗಗಳನ್ನು ಹೇಳಿರುವರು. ಅವುಗಳನ್ನು ಕಾರ್ಯಗತ ಮಾಡಿಯೂ ಕೂಡಾ ಆ ಉದರ ರೋಗವು ಶಮನವಾಗದಿದ್ದ ಪಕ್ಷಕ್ಕೆ ಕೊನೆಯದಾಗಿ ಶಸ್ತ್ರಕರ್ಮವನ್ನು ಆಚರಿಸಬೇಕು. ಎಂದು ಶಾಸ್ತ್ರಕಾರರ ಅಭಿಪ್ರಾಯವಾಗಿರುವದು.

ಆರ್ತಬಂಧು ನೃಪಾರ್ಥಿತಃ ಎಂದು ಹೇಳಿರುವದರಿಂದ, ಶಾಸ್ತ್ರಕಾರರಿಗೂ ಕೂಡಾ ಶಸ್ತ್ರಕರ್ಮದ ವಿಷಯದಲ್ಲಿ ಖಂಡಿತವಾಗಿ ಯಶಸ್ಸು ಸಿಗುವದು ಎಂದು ಹೇಳಲು ಧೈರ್ಯಸಾಲದು, ಎಂದು ಸ್ಪಷ್ಟವಾಗುತ್ತದೆ.

ಈ ಸಧ್ಯದ ಪರಿಸ್ಥಿತಿಯಲ್ಲಿ ಕೂಡಾ ನಾವು ನೋಡುತ್ತಿರಲಾಗಿ ಶಸ್ತ್ರಚಿಕಿತ್ಸೆ ಪಡೆದ ರೋಗಿಗಳು ಬದುಕುವದು ವಿರಳ. ಕ್ವಚಿತ್ ಬದುಕುಳಿದರೂ

ಕೂಡಾ ಒಂದಲ್ಲಒಂದು ವೇದನಾ ಪೀಡಿತರಾಗಿ ನರಳುತ್ತಿರುವದು ತೋರಿ ಬರುತ್ತದೆ.

ಇವೆಲ್ಲ ಕಾರಣಗಳಿಂದ ಶಸ್ತ್ರಕರ್ಮವು ಗೌಣವಾದ ಚಿಕಿತ್ಸಾಕರ್ಮವು ಎಂದು ಹೇಳಲು ಸಾಧ್ಯವಿದೆ.

ಶ್ರೀ ಮದ್ವಾಗ್ಭಟಾಚಾರ್ಯರು ಅಷ್ಟಾಂಗ ಹೃದಯ ಮೂತ್ರಾಘಾತ ಚಿಕಿತ್ಸಾ ೧೧ನೇ ಅಧ್ಯಾಯದ ಸೂತ್ರ ೪೩-೪೪ರಲ್ಲಿ ಈ ಕೆಳಗೆ ಬರೆದಂತೆ ವಿವಸಿರುವರು:—

ಸಿದ್ಧೈರುಪಕ್ರಮೈರೇಭಿರ್ನ ಚೆಚ್ಛಾಂತಿಸ್ತದಾ ಭಿಷಕ್ |
ಇತಿ ರಾಜಾನಮಾಪೃಚ್ಛ್ಯ ಶಸ್ತ್ರಂ ಸಾಧ್ವವಚಾರಯೇತ್ ||೪೩||
ಅಕ್ರಿಯಾಯಾಂ ಧ್ರುವೋ ಮೃತ್ಯುಃ ಕ್ರಿಯಾಯಾಂ
ಸಂಶಯೋ ಭವೇತ್ |
ನಿಶ್ಚಿತಸ್ಯಾಪಿ ವೈದ್ಯಸ್ಯ ಬಹುಶಃ ಸಿದ್ಧಕರ್ಮಣಃ ||೪೪||

ಅಂದರೆ ಮೊದಲಿಗೆ ಬೇರೆಬೇರೆ ಸಿದ್ಧ ಯೋಗಗಳನ್ನು ಪ್ರಯೋಗಿಸಿದರೂ ಕೂಡಾ ಆರೋಗವು ಉಪಶಮನವಾಗದೆ ಹೋದ ಪಕ್ಷದಲ್ಲಿಮಾತ್ರ ಶಸ್ತ್ರಕರ್ಮಕ್ಕೆ ಪ್ರವೃತ್ತರಾಗಬೇಕು ಎಂದು ಮಥಿತಾರ್ಥವಾಗಿರುವದು.

ಸಾರಾಂಶವೇನೆಂದರೆ, ಪ್ರಥಮತಃ ಎಲ್ಲ ವ್ಯಾಧಿಗಳಿಗೆ ಭೇಷಜ ಪ್ರಯೋಗವನ್ನು ವಿಧಿವತ್ ಆಚರಿಸಬೇಕು. ಈ ರೀತಿ ವಿಧಿಯುಕ್ತ ಭೇಷಜ ಪ್ರಯೋಗವು ಮಾಡಿಯೂ ಕೂಡಾ ಆ ರೋಗವು ಸಾಧ್ಯವಾಗದೆ ಹೋದಲ್ಲಿ ಮಾತ್ರ ಕೊನೆಯ ಪಕ್ಷಕ್ಕೆ ಶಸ್ತ್ರಕರ್ಮಕ್ಕೆ ಕೈ ಹಾಕಲು ಶಾಸ್ತ್ರಕಾರರು ಸಮ್ಮತಿಯನ್ನು ಕೊಟ್ಟಿರುವರೆಂದು ಸ್ಪಷ್ಟವಾಗುತ್ತದೆ. ಇದಲ್ಲದೆ ಆ ಶಸ್ತ್ರಕರ್ಮವನ್ನು ವಿಧಿವತ್ ಆಚರಿಸಿದರೂ ಕೂಡಾ ನಿಶ್ಚಯವಾಗಿ ಅದರಲ್ಲಿ ಯಶಸ್ಸು ದೊರೆಯುಬಹುದೆಂದು ಹೇಳಲು ಬರುವದಿಲ್ಲವೆಂತ ಶಾಸ್ತ್ರಕಾರರ ಅಭಿಪ್ರಾಯವು ಸ್ಪಷ್ಟವಾಗುತ್ತದೆ.

ಶ್ರೀ ಮದ್ವಾಗ್ಭಟಾಚಾರ್ಯರೂ ಕೂಡ ಶಸ್ತ್ರವಿಧಿ, ಶಲ್ಯಾಹರಣ ವಿಧಿ, ಶಿರಾವ್ಯಧವಿಧಿ, ಮತ್ತು ಶಸ್ತ್ರಕರ್ಮವಿಧಿ, ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಅಧ್ಯಾಯಗಳನ್ನು ಅಷ್ಟಾಂಗ ಹೃದಯ ಗ್ರಂಥದ ಸೂತ್ರ ಸ್ಥಾನದ ಕೊನೆಯಲ್ಲಿ ಹೇಳಿರುವರು.

ಶಾಸ್ತ್ರಕಾರರು ಈ ರೀತಿ ಶಸ್ತ್ರಕರ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಸೂತ್ರಸ್ಥಾನದ ಕೊನೆಯಲ್ಲಿ ಹೇಳಿರುವದರಿಂದ ಶಸ್ತ್ರ ಕರ್ಮವನ್ನು ಗೌಣ ಚಿಕಿತ್ಸಾಕರ್ಮದಲ್ಲಿ (ಕೊನೆಯ ಪಕ್ಷದ) ಸಮಾವೇಶಮಾಡಲು ಸಾಧ್ಯವೆಂದು ತೋರುತ್ತದೆ.

ಜಗತ್ಪ್ರಸಿದ್ಧ ಸಂಹಿತಾಕಾರರಾದ ಹಾಗೂ ಸಾಕ್ಷಾತ್ ಶ್ರೀ ಧನ್ವಂತರಿ ಸ್ವರೂಪರಾದ ಚರಕಾಚಾರ್ಯರು ಕೂಡ ಶಸ್ತ್ರಕರ್ಮದ ವಿಷಯಕ್ಕೆ ವಿಶೇಷ ಏನೂ ಹೇಳಿರುವದಿಲ್ಲ. ಹಾಗೂ ಶಸ್ತ್ರಕರ್ಮದ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿರುವದು ಎಲ್ಲಿಯೂ ಕಂಡುಬರುವದಿಲ್ಲ. ಮತ್ತು ಚರಕ ಸಂಹಿತಾಗ್ರಂಥವನ್ನು ಕಾಯ ಚಿಕಿತ್ಸಾ ಪ್ರಧಾನವಾಗಿಯೇ ರಚಿಸಿರುವರು.

ಸುಭಾಷಿತಕಾರರು ಶಸ್ತ್ರಕರ್ಮದ ಬಗ್ಗೆ ತಮ್ಮ ಅಭಿಪ್ರಾಯವನ್ನು ಈ ಕೆಳಗೆ ವಿವರಿಸಿದಂತೆ ಸ್ಪಷ್ಟೀಕರಿಸಿರುವರು:—

ರಸವೈದ್ಯೋ ಭವೇದ್ದೇವೋ ಮಾನುಷೋ ಮೂಲಿಕಾದಿಭಿಃ ।
ಆಸುರೋ ಶಸ್ತ್ರದಾಹಾಭ್ಯಾಂ ಸಿದ್ಧ ವೈದ್ಯಸ್ತು ಮಾಂತ್ರಿಕಃ ॥

ಅಂದರೆ ರಸ ಸಿದ್ಧಿಯನ್ನು ಪಡೆದು ಆದರಂತೆ ಚಿಕಿತ್ಸಾಕ್ರಮವನ್ನು ಮಾಡುವವನು ದೇವರಿಗೆ (ಅಂದರೆ ಅಶ್ವಿನೀ ದೇವತೆಗಳಿಗೆ) ಸಮಾನನಾದ ವೈದ್ಯನು. ವನಸ್ಪತಿ ಮೂಲಿಕಾಗಳಿಂದ ಚಿಕಿತ್ಸೆಯನ್ನು ಮಾಡುವವನು ಮಾನವ ವೈದ್ಯನು. ಶಸ್ತ್ರ ಕರ್ಮ ದಾಹಾದಿ ಕ್ರಿಯೆಗಳಿಂದ ಚಿಕಿತ್ಸೆಯನ್ನು ಮಾಡತಕ್ಕವನು ರಾಕ್ಷಸ ವೃತ್ತಿಯವನು ಅಂದರೆ ಅಧಮನು ಮತ್ತು ಮಂತ್ರ ಯಂತ್ರತಂತ್ರಾದಿಗಳಿಂದ ಚಿಕಿತ್ಸೆಯನ್ನು ಮಾಡುವವನು ಸಿದ್ಧವೈದ್ಯನು.

ತಾತ್ಪರ್ಯವೇನೆಂದರೆ, ಶಸ್ತ್ರಕರ್ಮವನ್ನು ಸ್ವಲ್ಪ ಗೌಣ ಚಿಕಿತ್ಸಾ ಕ್ರಮದಲ್ಲಿ ಎಣಿಸಲ್ಪಟ್ಟಿರುವರು ಎಂದು ಸ್ಪಷ್ಟವಾಗುತ್ತದೆ.

ಭೈಷಜ್ಯ ರತ್ನಾವಲಿಕಾರರೂ ಕೂಡಾ ಶಸ್ತ್ರ ಕರ್ಮದ ವಿಷಯಕ್ಕೆ ಹೇಳುವಾಗ ಅಧಮಃ ಶಸ್ತ್ರದಾಹಾಭ್ಯಾಂ ಎಂದು ಒತ್ತಿ ಹೇಳಿರುವರು. ಒಟ್ಟಿಗೆ ಹೇಳುವದಾದರೆ ಶಸ್ತ್ರ ಚಿಕಿತ್ಸಾಕ್ರಮವು ಅಧಮ ಚಿಕಿತ್ಸಾ (ಅಂದರೆ ಕ್ರೂರ ತರವಾದ) ಕ್ರಮದಲ್ಲಿ ಹೇಳಲ್ಪಟ್ಟಿರುತ್ತದೆ.


೭
೧ ೨ ೩ ೪ ೫ ೬ ೮


೧
೨
೩
೪
೫
೬




| | | ಟಪು |
|---|---|---|
| ೧ | ಶ್ಯೇನಮುಖ ಯಂತ್ರ | ೧೮ |
| ೨ | ಧಮನೀಗ್ರಾಹಿ ಯಂತ್ರ | ೧೯ |
| ೩ | ಸರ್ಪಫಣಮುಖಿ | ೩೯ |
| ೪ | ದ್ವಿಫಣ ಶಲಾಕಾ | ೪೩ |
| ೫ | ಏಕಫಣ ಶಲಾಕಾ | ೪೩ |
| ೬ | ಶರಪುಂಖ ಮುಖೀ | ೪೧ |
| ೭ | ದಂತಪಾತಕ ಶಲಾಕಾ | ೪೨ |



೧ ೨ ೩ ೪ ೫ ೬ ೭ ಪುಟ

| | | |
|---|---|---|
| ೧ | ಧೂಮನೇತ್ರ | ೧೧೪ |
| ೨ | ಲಿಂಗನಾಶ ಶಲಾಕಾ | ೯೭ |
| ೩ | ಸತಾಲ ಏಷಣಿಯ ಅಂತರ್ಭಾಗ | ೯೫ |
| ೪ | ಸತಾಲ ಏಷಣೀ | ೯೫ |
| ೫ | ಅನುಲೋಮನೀ ಏಷಣೀ | ೯೫ |
| ೬ | ಸೂಚೀಮುಖೀ ಏಷಣೀ | ೯೫ |
| ೭ | ದಂತಮಾಂಸ ಶಂಕು | ೯೪ |
| ೮ | ಬಸ್ತಿ ಪಾತ್ರ | ೧೨೪ |



೮



೧ ೨ ೩ ೪ ೫ ೬ ಪುಟ

| | | |
|---|---|---|
| ೧ | ಅನಿಗ್ರಹ ಸಂದಂಶ ಯಂತ್ರ (ನವೀನ) | ೨೧ |
| ೨ | ಸನಿಗ್ರಹ ಸಂದಂಶ ಯಂತ್ರ | ೨೧ |
| ೩ | ಕುರರಮುಖ ಯಂತ್ರ | ೨೦ |
| ೪ | ಕ್ರೌಂಚಮುಖ ಯಂತ್ರ | ೧೯ |
| ೫ | ಸಿಂಹಮುಖೀ ಯಂತ್ರ | ೧೫ |
| ೬ | ಕಂಕಮುಖೀ ಯಂತ್ರ | ೧೬ |

೧ ೨ ೩ ೪



| | | ಪುಟ |
|---|---|---|
| ೧ | ವ್ರೀಹಿಮುಖ ಶಸ್ತ್ರದಮುಚ್ಚಳ | ೯೦ |
| ೨ | ಕುಠಾರಿಕಾ | ೮೯ |
| ೩ | ತ್ರಿಕೂರ್ಚಕ | ೮೮ |
| ೪ | ವ್ರಣಬಸ್ತಿ | ೧೨೬ |

ಪುಟ
೧೧೪
೯೭
೯೫
೯೫
೯೫
೯೫
೯೪
೧೨೪


೪
೧ ೨ ೩ ೫ ೬ ೭ ೮




೯
೧೦






೮



೯

೧ ೨ ೩ ೪ ೫ ಪುಟ

| | | |
|---|---|---|
| ೧ | ಶಸ್ತ್ರಕೋಶ | ೧೨೭ |
| ೨ | ಅಶ್ಮರೀಪರೀಕ್ಷಕ | ೫೩ |
| ೩ | ಅಷ್ಠೀಲಾಶ್ಮ | ೫೯ |
| ೪ | ಅಸ್ಥಿ ಮುದ್ಗರ | ೬೦ |
| ೫ | ದಂಡಚುಂಬಕ | ೬೪ |














೧ ೨ ೩ ೪ ೫ ಪುಟ

| | | |
|---|---|---|
| ೧ | ಭ್ರೂಣ–ಉರೋವೀಕ್ಷಣ ಯಂತ್ರ | |
| ೨ | ಉರೋವೀಕ್ಷಣ ಯಂತ್ರ | ೧೧೮ |
| ೩ | ಜಿಹ್ವಾ ಪೀಡಕ | ೧೧೫ |
| ೪ | ನಾಸಾದರ್ಶಕ | ೧೧೪ |
| ೫ | ಅಂತರ್ಮುಖ ಭೇದ | ೧೧೩ |
| | | ೧೧೨ |

